श्रीमदानन्दतीर्थभगवत्पादाचार्यविरचितः

# श्रीमन्महाभारततात्पर्यनिर्णयः

एकोनविंशतिव्याख्याविलसितः

द्वितीयो भागः (४-६)


















सम्पादकौ
पं. पुराणिक जयतीर्थाचार्यः M.A.
पं. हेन्नूर श्रीनिवासतीर्थाचार्यः M.A.



प्रकाशनम् : विश्वमध्वमहापरिषत्

विश्वमध्वमहापरिपत् ग्रन्थमाला – ८७

श्रीमदानन्दतीर्थभगवत्पादाचार्यविरचितः

# श्रीमन्महाभारततात्पर्यनिर्णयः

एकोनविंशतिव्याख्याविलसितः

चतुर्थाध्यायतः नवमाध्यायान्तः

## द्वितीयो भागः

...सम्पादकौ...
पं. पुराणिक जयतीर्थाचार्यः
पं. हेब्बूर श्रीनिवासतीर्थाचार्यः

...प्रकाशनम्...
श्रीमन्मध्वाचार्यमूलमहासंस्थानम्
श्रीउत्तरादिमठः

विश्वमध्वमहापरिषत्

वसवनगुडि, बेंगळूरु – ४
२०११

V.M.M.P PUBLICATION NO – 87

# MAHABHARATATATPARYANIRNAYA

of

Sri Madhwacharya

With 19 commentaries

## Vol - 2

4 to 9 Chapters

Editors :

Pt. Jayatirthacharya Puranik. & Pt.Srinivasatirthacharya

... Published By...

Jagadguru Sri Madhwacharya Moola Maha Samsthana

SRI UTTARADIMATH

Vishva Madhwa Maha Parishat

BANGALORE - 4

2011

अस्मिन् पुस्तके मुद्रितानि

# एकोनविंशव्याख्यानानि

| | | |
|---|---|---|
| १ | श्रीव्यासतीर्थविरचिता | भारतभावपश्चिका |
| २ | श्रीवेदाङ्गतीर्थविरचिता | तात्पर्यदीपिका |
| ३ | श्रीवादिराजतीर्थविरचिता | भावप्रकाशिका |
| ४ | श्रीसत्याभिनवतीर्थविरचिता | दुर्घटार्थदीपिका |
| ५ | श्रीनवरत्नपुरुषोत्तमाचार्यविरचिता | लघुगुर्वर्थदीपिका |
| ६ | श्रीमधुसूदनभिक्षुविरचितः | प्रमाणसङ्ग्रहः |
| ७ | श्रीआद्यवरदराजाचार्यविरचिता | मन्दसुबोधिनी |
| ८ | श्रीजनार्दनभट्टविरचिता | पदार्थदीपिका |
| ९ | श्रीअनन्तभट्टविरचिता | तन्त्रमाला(सत्तत्वमाला) |
| १० | श्रीताम्रपर्णी श्रीनिवासाचार्यविरचिता | प्रमेयमणिमाला |
| ११ | श्रीभारतश्रीनिवासाचार्यविरचिता | तात्पर्यनिर्णयटिप्पणी |
| १२ | श्रीनिवासाचार्यविरचिता | भावचन्द्रिका |
| १३ | श्रीरामाचार्यविरचिता | भावविवृतिः |
| १४ | श्रीतिरुमलाचार्यविरचिता | अतिविशदवाक्यार्थविवृतिः |
| १५ | श्रीतिरुमलाचार्यविरचितः | प्रमाणसङ्ग्रहः |
| १६ | श्रीनरसिंहाचार्यविरचिता | गूढवाक्यार्थविवृतिः |
| १७ | श्रीचक्रपाणि श्रीनिवासाचार्यविरचितः | कण्टकोद्धारः |
| १८ | श्रीचट्टीकोनेरीआचार्यविरचितः | सर्वटीकासङ्ग्रहः |
| १९ | गूढकर्तृका | |



[redacted]

ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಸಂಸ್ಥಾಪಕರಾದ
ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ.

।। श्रीदिग्विजयरामो विजयते ।।

श्रीमज्जगद्गुरुश्रीमन्मध्वाचार्यमूलमहासंस्थानश्रीमदुत्तरादिमठाधीशानां

श्री १००८श्रीविभूषितानां श्रीमत्सत्यात्मतीर्थानां

# अनुग्रहसन्देशः

प्राचां रामायणमहाभारतभागवतप्रभृतिग्रन्थराजाः परिपूर्णभारतीयसंस्कृतेः तथा सनातनधर्मपरंपरायाः वीजभूताः विराजन्ते । ते च भगवति श्रद्धां, वर्णाश्रमोचितधर्मनिष्ठां, परोपकारमनीषां, गुरुषु विनयं, परलोकसाधनोपायं, संसारे विरक्तिं, हरौ सर्वोत्तमत्वदोषदूरत्वजगज्जन्मादिकारणत्वादिप्रज्ञां सर्वाधिकभक्तिं वर्धयन्ति । तथापि स्वभाषानभिज्ञजनान् उत्पथं प्रवर्तयन्ति सुपथः प्रच्यावयन्ति च । तेन आभीलं दुर्गतिं लभन्ते इति निश्चप्रचम् ।

त्रैलोक्याचार्याः श्रीमदानन्दतीर्थभगवत्पादाः ब्रह्मसूत्रनिर्णीतराद्धान्तप्रणाल्या भगवत्कृतपञ्चरात्राद्यविरोधेन वेदव्यासहृदयङ्गमार्थविलासं इतिहासपुराणादीनां प्रदर्श्य सन्मार्गतः स्खलज्जनान् उद्दध्रुः । तदर्थं श्रीमदाचार्यैः विरचितोऽयं ग्रन्थः श्रीमन्महाभारततात्पर्यनिर्णयः । अस्य ग्रन्थस्य आशयं प्रकटयितुं दशाधिकव्याख्यातारः स्वकीयया विशिष्टसरण्या अपूर्वप्रकृष्टव्याख्यानेन परमोपकारं अतन्वन् । तेषु नैककृतीः अस्मद्स्वरूपोद्धारकाः परमपूज्याः अस्मद्गुरवः भूयसा श्रमेण नैकस्थानेभ्यः संगृह्य अस्मान् परमानुग्रहेण अपूरयन् ।

काश्चन अपूर्वव्याख्यानानां मूलमातृकाः पं. व्यासनकेरे प्रभञ्जनाचार्याः, पं.मळगि जयतीर्थाचार्याः, पं. बन्नञ्जे गोविन्दाचार्याः, पं. पगडाल् राममूर्त्याचार्याः, पं. नागसम्पिगे आनन्दतीर्थाचार्याः तथा पं. प्रदीपसिंहाचार्याः सज्जनोपकाराय प्रकाशनाय ददुरिति तेषां सेवां सामोदं स्मरामः ।

पञ्चदशाधिकव्याख्यानैः सहितं श्रीमन्महाभारततात्पर्यनिर्णयग्रन्थं मुद्रापयित्वा उत्तरादिमठतः तथा विश्वमध्वमहापरिषद्द्वारा प्रकाशयितुं संकल्प्य पं.पुराणिक् जयतीर्थाचार्यं तथा पं. श्रीनिवासतीर्थाचार्यं च एतद्ग्रन्थसम्पादनकार्ये अज्ञापितवन्तः । एतौ महता श्रमेण जीर्णानि नैकलिपिलिखितानि हस्तलिखितव्याख्यापुस्कानि संशोध्य आरम्भिकाक्षरसंयोजनं च कृत्वा सम्पादनं चक्रतुः ।

आचार्यचरणनिरूपितप्रमेयानां तथा आख्यायिकानां विषये मूलप्रमाणानि, इतिहासपुराणानि, पञ्चरात्रमन्वादिस्मृतीश्च अधीत्य सूक्ष्मशेमुष्या विचार्य संवादितया पादटिप्पण्यां तेषां संयोजनेन श्रीमदाचार्याणां महतीं सेवां एतौ अकृषताम् । अर्वाचीनाः केचन आचार्योक्तवचांसि अप्रमाणानीति आक्षिपन्ति, निराधारविषयान् निरूपयन्ति इति अपवदन्ति एतदाक्षेपापवादप्रक्षालनक्षमानि मूलप्रमाणानि अत्र संयोजितानि इत्येतत् आचार्यवचसां प्रामाण्यस्थापने एतयोः श्लाघनीयप्रयत्नः । विद्वद्वरेण्यानां गुरूणां महाव्याघ्रोपाह्वविद्यासिंहाचार्याणां मार्गदर्शने संशोधनकार्यं श्रद्धया सम्पादितः वरीवर्तते ।

इतः पूर्वं अध्यायत्रयात्मकः प्रथमो भागः अस्माभिः प्रकाशितः । इदानीं अग्रेतनषडध्यायात्मको द्वितीयो भागः प्रकाश्यते । अखण्डश्रीमन्महाभारततात्पर्यनिर्णयसम्पादनं एवमेव तूर्णं पूर्णं स्यात् । इतरविषयसंशोधनमपि एवमेव प्रवर्तताम् ।

अस्य महतो ग्रन्थस्य ग्रन्थिलिपिबद्धायाः गूढवाक्यार्थविवृत्याख्यटिप्पण्याः संशोधनकार्यं पं. इटगि वेदव्यासाचार्यः तथा अस्याः कृतेः अक्षरसंयोजनं पं. जोशि महिदासाचार्यः अकुरुत ।

सर्वान् एतान् ज्ञानभक्तिवैराग्यादिभिः अनुगृह्णन्त्विति अस्मदुपास्यान् श्रीमूलसीतासमेत-श्रीमूलरामदिग्विजयराम वेदव्यासान् प्रार्थयामहे । अस्य ग्रन्थस्य उपयोगं सर्वे सुजनाः लभन्तामिति च आशास्महे ।

इति नारायणस्मरणानि

**श्री सत्यात्मतीर्थश्रीपादाः**

उत्तरादिमठः

# ಪ್ರಕಾಶಕರ ನುಡಿ

ಶ್ರೀಮದಾಚಾರ್ಯರ ಮಹಾಕೃತಿ ಮಹಾಭಾರತತಾತ್ಪರ್ಯನಿರ್ಣಯ. ಅದರ ಮಹತಿಯನ್ನು ಮಹಾನುಭಾವರೇ ಬಲ್ಲರು. ಅದರಲ್ಲಡಗಿರುವ ಪ್ರಮೇಯರಾಶಿಗಳನ್ನು ಜಗತ್ತಿಗೆ ತೋರಿಸುವುದಕ್ಕಾಗಿಯೇ ಅನೇಕ ಜ್ಞಾನಿಗಳು ಇದರ ವ್ಯಾಖ್ಯಾನವನ್ನು ಮಾಡಿ ನಮ್ಮೆಲ್ಲರಿಗೂ ಪರಮೋಪಕಾರ ಮಾಡಿದ್ದಾರೆ. ಅವುಗಳಲ್ಲಿ ಉಪಲಬ್ಧವಾದ 19 ವ್ಯಾಖ್ಯಾನಗಳಸಹಿತವಾಗಿ ತಾತ್ಪರ್ಯನಿರ್ಣಯದ ರಾಮಾಯಣ ಕಥಾಭಾಗವನ್ನೊಳಗೊಂಡ 4 ರಿಂದ 9 ಅಧ್ಯಾಯದ ವರೆಗಿನ ಈ ದ್ವಿತೀಯಭಾಗವನ್ನು ಸಾರಸ್ವತಲೋಕಕ್ಕೆ ಸಮರ್ಪಿಸಲು ಪರಿಷತ್ತು ಹರ್ಷಪಡುತ್ತಿದೆ. ಈಗಾಗಲೇ ಮೊದಲ 3 ಅಧ್ಯಾಯಗಳನ್ನೊಳಗೊಂಡ ಪ್ರಥಮಭಾಗವು ಪ್ರಕಾಶಿತವಾಗಿದ್ದು ವಿಮರ್ಶಕರ ವಿದ್ವಾಂಸರ ವಿಶೇಷ ಮನ್ನಣೆಗೆ ಪಾತ್ರವಾಗಿದೆ.

ಪರಿಷತ್ತಿನ ಹೆಮ್ಮೆಯ ಪ್ರಕಾಶನಗಳಲ್ಲೊಂದಾದ ಈ ಕೃತಿ ಪರಮಪೂಜ್ಯ ಶ್ರೀ 1008 ಶ್ರೀ ಸತ್ಯಾತ್ಮತೀರ್ಥರ ಪರಮಾನುಗ್ರಹ ಹಾಗೂ ಸಂಪಾದಕರಾದ ಪಂ.ಜಯತೀರ್ಥಾಚಾರ್ಯ ಪುರಾಣಿಕ, ಪಂ.ಶ್ರೀನಿವಾಸತೀರ್ಥಾಚಾರ್ಯ ಇವರ ನಿರಂತರ ಪರಿಶ್ರಮದಿಂದ ಸಿದ್ಧವಾಗಿದೆ. ಅನೇಕ ಪ್ರಾಚೀನ ಹಸ್ತಪ್ರತಿಗಳನ್ನು ಸಂಶೋಧಿಸಿ ಗ್ರಂಥದ ಸಂಪಾದನೆಯನ್ನು ಮಾಡಿದ್ದಾರೆ. ಶ್ರೀಮದಾಚಾರ್ಯರ ವಾಕ್ಯಗಳಿಗೆ, ಪ್ರಮೇಯಗಳಿಗೆ ಸಂವಾದಿಯಾಗುವ ಅವುಗಳನ್ನು ಸಮರ್ಥನೆ ಮಾಡುವ ಪ್ರಮಾಣಗಳನ್ನು ಯುಕ್ತಿಗಳನ್ನು ನಾನಾ ಮೂಲ ಆಕರಗಳಿಂದ ಸಂಗ್ರಹಿಸಿ ಅಡಿಟಿಪ್ಪಣಿಯಲ್ಲಿ ನೀಡಿದ್ದಾರೆ. ಅದರ ಹಿಂದೆ ಅವರು ಪಟ್ಟ ಪರಿಶ್ರಮ ಇದು ವಿದ್ವಾಂಸರಿಗೇ ಗೋಚರಿಸುವಂಥದ್ದು. ಅಂತೂ ಈ ಇಬ್ಬರು ವಿದ್ವಾಂಸರ ವಿಶೇಷ ಪರಿಶ್ರಮದಿಂದ ಒಂದು ಮಹತ್ತರವಾದ ಕೃತಿ ಪರಿಷತ್ತನಿಂದ ಹೊರಬರುತ್ತಿದೆ. ಅದಕ್ಕಾಗಿ ಪರಿಷತ್ತು ಅವರಿಗೆ ಆಭಾರಿಯಾಗಿದೆ.

ಈ ಗ್ರಂಥದ ಪ್ರಕಾಶನಕ್ಕೆ ಮೂಲ ಕಾರಣರಾದವರು ಪರಮಪೂಜ್ಯ ಪ್ರಾತಸ್ಮರಣೀಯರಾದ ಶ್ರೀ ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು. ಅವರು ನಿರಂತರ ಪರಿಶ್ರಮದಿಂದ ಈ ವ್ಯಾಖ್ಯಾನಗಳನ್ನು ಸಂಗ್ರಹಿಸದೇ ಹೋಗಿದ್ದರೆ ಈ ಕೃತಿ ಅಷ್ಟೇ ಅಲ್ಲ ಪರಿಷತ್ತಿನಿಂದ ಪ್ರಕಾಶಿತವಾದ ಅಪರೂಪದ ಯಾವ ಕೃತಿಗಳೂ ಜಿಜ್ಞಾಸುಗಳ ಕೈಸೇರುತ್ತಿರಲಿಲ್ಲ. ಅದಕ್ಕಾಗಿ ಆ ಮಹಾನುಭಾವರ ಉಪಕಾರವನ್ನು ಎಷ್ಟು ಸ್ಮರಣೆ ಮಾಡಿದರೂ ಸಾಲದು. ಪ್ರತಿಯೊಬ್ಬ ವಿದ್ವಾಂಸರೂ ಜಿಜ್ಞಾಸುಗಳೂ ಅವರಿಗೆ ಚಿರಋಣಿಗಳಾಗಿದ್ದಾರೆ. ಅಂತಹ ಮಹಾಚೇತನದ ಅಡಿದಾವರೆಗಳಲ್ಲಿ ಅನಂತ ಶಿರಸಾಷ್ಟಾಂಗ ನಮಸ್ಕಾರಗಳು.

ಈ ಗ್ರಂಥಪ್ರಕಾಶನಕ್ಕೆ ಮೂಲಪ್ರೇರಣೆ ಪರಮಪೂಜ್ಯ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು. ಪ್ರಾತಃಸ್ಮರಣೀಯರಾದ ಶ್ರೀ ಸತ್ಯಪ್ರಮೋದತೀರ್ಥರು ಸಂಗ್ರಹಿಸಿದ, ತಮ್ಮಲ್ಲಿರುವ ಅನೇಕ ಹಸ್ತಪ್ರತಿಗಳನ್ನು ನೀಡುವುದಲ್ಲದೇ ಪ್ರತಿಯೊಂದು ಹಂತದಲ್ಲಿಯೂ ವಿಶೇಷವಾದ ಪ್ರೋತ್ಸಾಹವನ್ನು ನೀಡುತ್ತಾ ಪರಮೋಪಕಾರ ಮಾಡಿದ್ದಾರೆ. ಈ ಮೂಲಕ ಪರಿಷತ್ತಿನ ಸರ್ವತೋಮುಖವಾದ ಬೆಳವಣಿಗೆಗೆ ಮೂಲವಾಗಿದ್ದಾರೆ. ಇಂತಹ ಮಹಾನುಭಾವರ ಅಡಿದಾವರೆಗಳಲ್ಲಿ ಅನಂತ ಶಿರಸಾಷ್ಟಾಂಗಪ್ರಣಾಮಗಳು.

ಈ ಗ್ರಂಥದ ಪ್ರಕಾಶನಕ್ಕೆ ವಿಶಿಷ್ಟವಾಗಿ ಮಾರ್ಗದರ್ಶನ ಮಾಡಿದವರು ಶ್ರೀಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಪಂ. ವಿದ್ಯಾಸಿಂಹಾಚಾರ್ಯರು. ಸಂಶೋಧನೆಯ ಹಂತದಲ್ಲಿ ಸುಮಾರು ನಾಲ್ಕು ವರ್ಷಗಳ ವರೆಗೆ ಸಂಶೋಧಕರನ್ನು ವಿದ್ಯಾಪೀಠದಲ್ಲಿಯೇ ಇಟ್ಟುಕೊಂಡು ಎಲ್ಲ ರೀತಿಯಾದ ಅನುಕೂಲಗಳನ್ನು ಮಾಡಿಕೊಡುವುದಲ್ಲದೇ ಅವರಿಗೆ ವಿಶಿಷ್ಟವಾದ ರೀತಿಯಲ್ಲಿ ಮಾರ್ಗದರ್ಶನ ಮಾಡಿದ್ದಾರೆ. ಇಂತಹ ಆಚಾರ್ಯರಿಗೆ ಸಾಷ್ಟಾಂಗಪ್ರಣಾಮಗಳು.

ಈ ಗ್ರಂಥದ ಪ್ರಕಾಶನಕ್ಕೆ ತಮ್ಮ ಸಂಗ್ರಹದಲ್ಲಿಯ ಹಸ್ತಪ್ರತಿಗಳನ್ನು ನೀಡಿದ ಪಂ. ಪ್ರಭಂಜನಾಚಾರ್ಯ, ಪಂ. ಬನ್ನಂಜೆ ಗೋವಿಂದಾಚಾರ್ಯ, ಪಂ. ಜಯತೀರ್ಥಾಚಾರ್ಯ ಮಳಗಿ, ಪಂ. ರಾಮಮೂರ್ತ್ಯಾಚಾರ್ಯ ಪಗಡಾಲ, ಪಂ. ಪ್ರದೀಪಸಿಂಹಾಚಾರ್ಯ ಇವರಿಗೆ ನಮಸ್ಕಾರಗಳು. ಮತ್ತು ಮೈಸೂರ್ ಪ್ರಾಚ್ಯವಿದ್ಯಾಸಂಶೋಧನಾಲಯ, ಮದ್ರಾಸ್ ಪ್ರಾಚ್ಯವಿದ್ಯಾಸಂಶೋಧನಾಲಯಕ್ಕೆ, ಮುದ್ರಣದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ ವಾಗರ್ಥಮುದ್ರಣಾಲಯದ ಬಳಗಕ್ಕೂ ಪರಿಷತ್ತು ಆಭಾರಿಯಾಗಿದೆ.

ಈ ಕೃತಿಯ ಲಾಭವನ್ನು ವಿದ್ವಾಂಸರು ಹಾಗೂ ಜಿಜ್ಞಾಸುಗಳು ಪಡೆದಲ್ಲಿ ಪರಿಷತ್ತಿನ ಶ್ರಮ ಸಾರ್ಥಕವಾಗುತ್ತದೆ.

ಪ್ರಧಾನ ಕಾರ್ಯದರ್ಶಿ

**ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ, ಬೆಂಗಳೂರು**

# ಪ್ರಸ್ತಾವನೆ

ಪೂರ್ಣಃ ಪ್ರೇಷ್ಠಃ ಪರಃ ಸ್ವಾಮೀ ವ್ಯಾಪ್ತಃ ಕರ್ತೋಪಕಾರಕಃ ।
ರಕ್ಷತ್ಯೇವ ತದೀಯಂ ಮಾಂ ಕರ್ಮಾಚ್ಯೋ ಗುರುದೇವಗಃ ॥

ಮಹಾಭಾರತ ದೈವೀಜೀವನದ ಹಾಗು ಮಾನುಷಜೀವನದ ಮಹಾಭಾಷ್ಯ. ಉನ್ನತವಾದ ಬದುಕಿಗೆ ದಾರಿತೋರುವ ದಾರಿದೀಪ.ದೇವತೆಗಳಿಂದಾರಂಭಿಸಿ ಮುನಿಮಹರ್ಷಿಮಾನವನವರೆಗಿನ ಎಲ್ಲರ ಜೀವನವನ್ನು ಸರ್ವಾಂಗಸುಂದರವಾಗುವಂತೆ ಮಾಡುವ ಜೀವನಸಂಹಿತೆ. ಸಮಾಜದಲ್ಲಿ ಸೇರಿದ ಎಲ್ಲಸ್ತರದ ಜೀವರಾಶಿಗಳು ಬಾಳಲು ಬೇಕಾದ ಎಲ್ಲವಿಧವಾದ ಉಪಾಯಗಳನ್ನು ದೃಷ್ಟಾಂತಪೂರ್ವಕವಾಗಿ ತೋರಿಸುವ ಒಂದು ವಿಶ್ವಕೋಶ. ಸುಖ-ದುಃಖ, ರಾಗ-ದ್ವೇಷ, ಕಾಮ-ಕ್ರೋಧ, ಸ್ನೇಹ-ದ್ರೋಹ, ಆಸೆ-ನಿರಾಸೆ, ಅನುರಾಗ- ವೈರಾಗ್ಯ ಇತ್ಯಾದಿ ಅನೇಕ ಅಂತಃಕರಣವೃತ್ತಿಗಳ ಹೊಯ್ದಾಟ ತುಯ್ದಾಟಗಳ ರಮಣೀಯವೃತ್ತಾಂತ. ಇದಲ್ಲದೆ ವೇದಗಳೂ ಪರಿಚಯಿಸದ, ಭಗವಂತನ ಬುದ್ಧಿಯಲ್ಲಿ ಮಾತ್ರ ಅಪರಿಚಿತವಾಗಿ ಉಳಿದುಕೊಂಡ ಭೂಮಾಪುರುಷನ ಭವ್ಯವಾದ ಅನಂತಗುಣಗಳನ್ನು ತಿಳಿಸುವ 'ವ್ಯಾಸವೇದ'. ಆದ್ದರಿಂದಲೇ ಇದು ಬ್ರಹ್ಮಾದಿದೇವತೆಗಳೂ ಭಗವದ್ಗುಣಗಳನ್ನು ತಿಳಿಸುವ ಹಿರಿದಾದ ಹೊತ್ತಿಗೆ. ಈ ಗ್ರಂಥದಲ್ಲಿ ಅಡಗಿದ ಗೂಢಾರ್ಥವನ್ನು ಮಥಿಸಿ ಮತಿಯಲ್ಲಿ ಮನನ ಮಾಡುವುದು ಆ ಮೇಧಾವಿಮೂರ್ಧನ್ಯರಿಗೇ ಸಾಧ್ಯ.

ಈ ರೀತಿ ದೇವಾನುದೇವತೆಗಳಿಗೂ ಆ ಪರಾತ್ಪರನ ಗುಣಗಳನ್ನು ತಿಳಿಸಿಕೊಡುವ ಈ ಮಹಾಭಾರತ ಶ್ರೀಸಾಮಾನ್ಯರ ಬಾಳನ್ನು ತಿದ್ದಿ, ಬದುಕಿಗೊಂದು ಭರವಸೆಯನ್ನಿತ್ತು, ಆದರ್ಶದ ಅರಿವನ್ನು ಮೂಡಿಸಿ, ಪಾಮರರನ್ನೂ ಪರತತ್ವದೆಡೆಗೆ ಕರೆದೊಯ್ಯುವ ಮೋಕ್ಷಗೀತೆ.

ಇದು ಧೀಮಂತರಿಗೂ ಧರ್ಮಪ್ರಜ್ಞೆಮೂಡಿಸುವ ಧರ್ಮಸಂಹಿತೆ. ಅರ್ಥನೀತಿಜ್ಞರಿಗೂ ಅರ್ಥದ ಅರಿವುಮೂಡಿಸುವ ಅರ್ಥಶಾಸ್ತ್ರ, ಕುತ್ಸಿತಕಾಮಕ್ಕೆ ಕಡಿವಾಣ ಹಾಕುವ ಕಾಮಶಾಸ್ತ್ರ, ಮುಮುಕ್ಷುಗಳಿಗೆ ಮುಕುಂದಮಂದಿರ ತೋರುವ ಮೋಕ್ಷಶಾಸ್ತ್ರ, ರಾಜಧರ್ಮ, ಸ್ತ್ರೀಧರ್ಮ, ತೀರ್ಥಯಾತ್ರಾವಿಧಿ, ಭೂಗೋಲ, ಖಗೋಲ, ರಾಜನೀತಿ, ಅರ್ಥನೀತಿ, ದಂಡನೀತಿ, ವ್ಯವಹಾರ, ವಾಣಿಜ್ಯ, ಸಾಹಿತ್ಯ, ಸಂಸ್ಕೃತಿ, ಸಮಾಜಜೀವನ ಇತ್ಯಾದಿ ಇತ್ಯಾದಿ ಅನೇಕ ವಿಷಯಗಳ ವಿಸ್ತೃತವಿವರ ಇಲ್ಲಿದೆ. ಇಲ್ಲಿ ಹಲವಾರು ಶಾಸ್ತ್ರಗಳು ಕೈಯಲ್ಲಿ ಕೈಹಾಕಿಕೊಂಡು ನಿಂತಿವೆ. ವಿಶ್ವದ ಯಾವುದೇ ಹೊತ್ತಿಗೆಯನ್ನು, ಸರಿಸಾಟಿಯಿಲ್ಲದ ಇದರ ಹರುವು ಹಾಗೂ ಘನಗಾಂಭೀರ್ಯದೊಂದಿಗೆ ಹೋಲಿಸಲಾಗದು. ಸಮಗ್ರವಿಶ್ವಸಾಹಿತ್ಯದಲ್ಲಿ ಇದೊಂದು ಅಸಾಧಾರಣವಿಸ್ಮಯವಾಗಿದೆ. ಹೀಗೆ ಗಾತ್ರದಲ್ಲಿ ಬೃಹತ್ತರವೂ ಗುಣಗಳಿಂದ ಮಹತ್ತಮವೂ ಆದುದರಿಂದ ಇದಕ್ಕೆ ಮಹಾಭಾರತವೆಂದು ಕರೆಯುತ್ತಾರೆ.

ಆದ್ದರಿಂದಲೇ ಅನಾದಿಯಾದ ವೇದಗಳು ಇದನ್ನು 'ಪಂಚಮವೇದ' ಎಂದು ಹಾಡಿ ಹೊಗಳಿವೆ. ಪುರಾಣಗಳು 'ಸರ್ವಶಾಸ್ತ್ರಸಾರ' 'ಬಹ್ವರ್ಥ' 'ದಶಾರ್ಥ' 'ವೇದಾದಪ್ಯುತ್ತಮ' 'ಪಂಚಮವೇದ' ಮೊದಲಾದ ಪ್ರಶಸ್ತಿಗಳನ್ನು ನೀಡಿ ಗೌರವಿಸುತ್ತವೆ. 'ಅಷ್ಟಾದಶಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ । ವೇದಾಃ ಸಾಂಗಾಸ್ತಥೈಕತ್ರ ಭಾರತಂ ಚೈಕತಃ ಸ್ಥಿತಮ್ ॥ ಎಂದು ಸ್ವಯಂ ವ್ಯಾಸರು ಇದರ ಹಿರಿಮೆಯನ್ನು ಹೇಳುತ್ತಾರೆ. ಆದ್ದರಿಂದಲೇ ಆಚಾರ್ಯರು ಬಿಚ್ಚುಮನಸ್ಸಿನಿಂದ ಇದರ ವಿಷಯದಲ್ಲಿ 'ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂ ಪರಿಚಕ್ಷತೇ' ಎಂಬ ಹೆಗ್ಗಳಿಕೆಯ ಮಾತನ್ನು ಹೇಳುತ್ತಾರೆ.

**ನಿರ್ಣಯಕ್ಕೆ ನಾಂದಿಹಾಡಿದ ಆನಂದತೀರ್ಥರು -**

ವೇದಗಳು ಅನಂತ. ಅವುಗಳ ಅರ್ಥ ಅಗಮ್ಯ. ಇತಿಹಾಸಪುರಾಣಗಳ ಸಹಾಯದಿಂದಲೇ ವೇದಗಳಲ್ಲಿಯ ರಹಸ್ಯಾರ್ಥಗಳನ್ನು ಬೆಳಕಿಗೆ ತರಬೇಕು. 'ಸಮಗ್ರ ವೇದಗಳ ಅಧ್ಯಯನಮಾಡಿದ್ದರೂ ಇತಿಹಾಸಪುರಾಣಗಳ ಪರಿಶೀಲನೆ ಮಾಡದ ವ್ಯಕ್ತಿ ನನಗೆ ಅಪಾರ್ಥಮಾಡುತ್ತಾನೆ' ಎಂದು ವೇದವೇ ಎಚ್ಚರಿಸುತ್ತದೆ. ಈ ವೇದಗಳ ಸರಿಯಾದ ಅರ್ಥ ಅರಿಯಲು ಭಗವಾನ್ ವೇದವ್ಯಾಸದೇವರು ಮಹಾಭಾರತವನ್ನು ರಚಿಸಿದರು. ಪುರಾಣಗಳನ್ನು ಸಂಗ್ರಹಿಸಿದರು. ಆದರೆ ಈ ಇತಿಹಾಸಪುರಾಣಗಳಲ್ಲಿ ಜನರು ತಮ್ಮ ತಲೆಗೆ ತೋರಿದ್ದನ್ನು ತುರುಕಿದರು. ತಲೆಗೆ ಹಿಡಿಸದ್ದನ್ನು ತೆಗೆದೆಸೆದರು. ಹೀಗೆ ತಲೆತಿರುಕರು ತಿರುಚಿದ್ದರಿಂದ ಇತಿಹಾಸಪುರಾಣಗಳು ಗೊಂದಲದ ಗೊಂಡಾರಣ್ಯವಾದವು. ಇದನ್ನು ಅರ್ಥೈಸುವುದೇ ಜನರಿಗೆ ಬಹುಕ್ಲಿಷ್ಟವಾಯಿತು. ನಿರ್ಣಾಯಕವಾದ ಇತಿಹಾಸಪುರಾಣಗಳ ಪಾಡೇ ಹೀಗಿರುವಾಗ ವೇದಗಳ ನಿಜವಾದ ಅರ್ಥ ಅರಿಯುವುದು ಅತಿದುಸ್ತರವಾಯಿತು. ಭಾರತ-ಪುರಾಣಾದಿಗಳೆಲ್ಲವೂ ಪರಸ್ಪರ ಅಸಂಬದ್ಧವಾಗಿ ತೋರತೊಡಗಿದವು. ಇವುಗಳಲ್ಲಿಯ ವಿರುದ್ಧವಾದ ಸಂಗತಿಗಳ ಹೊಂದಾಣಿಕೆ ಮಾಡಿಕೊಳ್ಳಲಾಗಲಿಲ್ಲ. ಆದ್ದರಿಂದ ಅದರ ನಿಜವಾದ ಅರ್ಥ ತಿಳಿಯದೆ ಭ್ರಮೆಯಲ್ಲಿ ಮುಳುಗಿದರು. ದೋಷಲೇಶರಹಿತನಾದ ಭಗವಂತನು ಪರಶುರಾಮರಾಮಕೃಷ್ಣ ಮುಂತಾದ ಅವತಾರಗಳಲ್ಲಿ ತೋರಿಸುವ ಅಜ್ಞಾನ, ಅಶಕ್ತಿ, ದುಃಖ, ದೌರ್ಬಲ್ಯ, ಭೇದ-ಭೇದ, ಚಿಂತಾ-ಸಂತಾಪ ಮೊದಲಾದ ದೋಷಗಳು ವಾಸ್ತವಿಕ, ಅವನೊಬ್ಬ ಸಾಮಾನ್ಯಮಾನವ ಇತ್ಯಾದಿ ಎಂದು ಭ್ರಮೆಗೊಳಗಾದರು. ಭಗವಂತ ಹಾಗೂ ಭಗವದ್ಭಕ್ತರಾದ ಮಹಾತ್ಮರ ಆಚಾರವಿಚಾರಗಳು ಧರ್ಮವಿರುದ್ಧ , ಲೋಕವ್ಯತಿರಿಕ್ತ ಎಂದು ಕಂಡವು. ಹೀಗೆ ಆದರ್ಶಪೂರ್ಣವಾದ ರಾಜಮಹಾರಾಜರ ಜೀವನದ ಧ್ಯೇಯಧೋರಣೆಗಳು, ರೋಮಾಂಚಕ ಇತಿವೃತ್ತಗಳು, ಸದಾಚಾರ, ದೇವಭಕ್ತಿ, ಗುರುಭಕ್ತಿ, ಪಿತೃಮಾತೃಭಕ್ತಿ, ಸೌಶೀಲ್ಯ, ಸೌಜನ್ಯ, ಸಚ್ಚಾರಿತ್ರ್ಯ, ಪರೋಪಕಾರ, ಇಂದ್ರಿಯನಿಗ್ರಹ, ಯಮ-ನಿಯಮ, ಸತ್ಯ, ಅಹಿಂಸೆ, ದಾನ, ಮುಂತಾದ ಅಂತರಂಗ-ಬಹಿರಂಗ ಉನ್ನತಿಗೆ ಕಾರಣವಾದ ಜೀವನದ ಮೌಲ್ಯಗಳಲ್ಲಿ ಭಕ್ತ್ಯಾದರಗಳು ಅಳಿಯಲಾರಂಭಿಸಿದವು.

**ಭಾಷಾತ್ರಯಗಳ ಚೆಕ್ಕಿನಾಟ -**

ಇಷ್ಟು ಸಾಲದೆಂಬಂತೆ ಭಗವಾನ್ ವೇದವ್ಯಾಸದೇವರು ಭಾಷಾತ್ರಯಗಳನ್ನು, ವ್ಯತ್ಯಾಸಾದಿಸಪ್ತಭೇದಗಳು, ವೈದರ್ಭೀ ಮೊದಲಾದ ನೂರಾರು ರೀತಿಗಳು ಇವೆಲ್ಲವನ್ನು ಬಳಸಿ ಭಾರತ-ಪುರಾಣಗಳನ್ನು ರಚಿಸಿದರು. ಈ ಕ್ರಮವನ್ನು ವೇದವ್ಯಾಸದೇವರು ಹುಟ್ಟುಹಾಕಲಿಲ್ಲ.

**ತ್ರಿಭಾಷಾಂ ಯೋ ನ ಜಾನಾತಿ ರೀತೀನಾಂ ಶತಮೇವ ಚ ।**
**ವ್ಯತ್ಯಾಸಾದೀನ್ ಸಪ್ತಭೇದಾನ್ ವೇದಾದ್ಯರ್ಥಂ ತಥಾ ವದೇತ್ ॥ಮ.ತಾ.ನಿ.೧.೩೩**

ಎಂದು ಆಚಾರ್ಯರು ತಿಳಿಸುವಂತೆ ಅನಾದಿಯಾದ ಅಪೌರುಷೇಯವಾದ ವೇದಗಳೇ ಭಾಷಾತ್ರಯ, ವ್ಯತ್ಯಾಸಾದಿಗಳನ್ನು ಅನುಸರಿಸಿ ತತ್ವವನ್ನು ನಿರೂಪಿಸುತ್ತವೆ. ಹೀಗೆ ಭಾಷಾತ್ರಯಗಳನ್ನು ಬಳಸಿ ಗ್ರಂಥವನ್ನು ಬರೆದಿರುವದರಿಂದ ಅವುಗಳ ತಿರುಳನ್ನು ತಿಳಿಯದ ಮಾನವ ಗ್ರಂಥದ ಸರಿಯಾದ ಅರ್ಥವನ್ನು ತಿಳಿಯಲಾರ.

ಈ ಭಾಷಾತ್ರಯಗಳನ್ನು ಬಳಸುವುದಕ್ಕೆ ಪ್ರಯೋಜನ ಏನು? ಎನ್ನುವ ವಿಚಾರ ಒತ್ತಟ್ಟಿಗಿರಲಿ. ಆದರೆ ಮೂರುಭಾಷೆಗಳಿಂದಾಗಿ ಸಾತ್ವಿಕರಾದ ಸಾಮಾನ್ಯಪಾಮರರು ವೇದವ್ಯಾಸರ ಹಾರ್ದ ತಿಳಿಯದೆ

ಪಾಡುಪಡಬೇಕಾಯಿತು. ಮಹಾಭಾರತಪುರಾಣಗಳನ್ನು ಬರೆದ ವೇದವ್ಯಾಸದೇವರು ಈ ಎಲ್ಲ ಗೊಂಡಾರಣ್ಯದ ವಿಷಮವೀಥಿಗಳನ್ನು ಸುಲಭವಾಗಿ ದಾಟುವದಕ್ಕಾಗಿ ಲಕ್ಷಣಗ್ರಂಥವನ್ನು ಬರೆದಿಟ್ಟರು. ಆದರೆ ದುರ್ವಿಧಿಯ ವಿಲಾಸದಿಂದಾಗಿ ಆ ಲಕ್ಷಣಗ್ರಂಥವೂ ಲುಪ್ತವಾಯಿತು.

ಈ ರೀತಿ ಪ್ರಕ್ಷೇಪವಿಕ್ಷೇಪಗಳ ಹಾವಳಿ ಹಾಗು ಭಾಷಾತ್ರಯಗಳ ಚೆಕ್ಕಿನಾಟದಿಂದ ಕಾಪುರುಷರ ಕೈವಾಡವಿಲ್ಲದ ನಿಜವಾದ ಕೃತಿ ಯಾವುದೆಂದು ತಿಳಿಯದಾಯಿತು. ದಾರಿತೋರುವ ಲಕ್ಷಣಗ್ರಂಥವೆಂಬ ದೀವಟಿಗೆ ಇಲ್ಲದೆ ಭಾರತಪುರಾಣಗಳ ನಿಜವಾದ ಅರ್ಥ ಅರಿಯುವ ಮಾರ್ಗ ಇಲ್ಲದಾಯಿತು. ಹೀಗೆ ಪರಾತ್ಪರತತ್ತ್ವವನ್ನು ಅನ್ವೇಷಿಸಲು ಹೊರಟ ದೀರ್ಘಪಯಣದ ದಾರಿಪೋಕರು ದಾರಿದೀಪವಿಲ್ಲದೆ ದಿಙ್ಮೂಢರಾದರು.

**'ದಯಯಾ ವಿಶೋಧಯ'**

ಹೀಗೆ ಹ್ರಾಸದ ಹಾದಿ ಹಿಡಿದ ಹರಿಭಕ್ತರ, ದಾರಿ ಜಾರಿದ ದೀನರ ಅಭ್ಯುತ್ಥಾನಕ್ಕಾಗಿ ಭಗವಾನ್ ಆನಂದ ತೀರ್ಥರ ಕರುಣೆಯ ಕುಡಿಯಾಗಿ, ಭಾವುಕರ ಅಂಕುಡೊಂಕಾದ ಭಾವಗಳನ್ನು ಪರಿಷ್ಕರಿಸುವದಕ್ಕಾಗಿ, ಭಗವಂತನ ಗುಣಗಣಗಳಿಗೆ ಕನ್ನಡಿಯಾಗಿ ಉದ್ಭವಿಸಿತು **'ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ'**

ಈ ದಿವ್ಯ ಗ್ರಂಥರಾಜವನ್ನು ರಚಿಸಿ ಸಜ್ಜನರಿಗೆ ಪರಮೋಪಕಾರಮಾಡಿದವರು ಶ್ರೀಮದಾನಂದತೀರ್ಥ-ಭಗವತ್ಪಾದಾಚಾರ್ಯರು. ವೇದವ್ಯಾಸದೇವರ ಅಚ್ಚುಮೆಚ್ಚಿನ ಅಂತರಂಗಶಿಷ್ಯರಾದ ಆಚಾರ್ಯರು ಬದರಿಯಲ್ಲಿ ವ್ಯಾಸ-ನಾರಾಯಣರ ಸನ್ನಿಧಿಯಲ್ಲಿಯೇ ಇರಲು ಬಯಸಿದರು. ಕೃಪಾಪೂರ್ಣನಾದ ಭಗವಂತನ ಅಣತಿಯಂತೆ ಕೇವಲ ಸಜ್ಜನರ ಮೇಲಿರುವ ಕರುಣೆಯಿಂದ ಈ ಗ್ರಂಥವನ್ನು ರಚಿಸಿದರು. ಅವರ ಕರುಣಾಕಟಾಕ್ಷವಿಲ್ಲದಿದ್ದರೆ ಈ ಗ್ರಂಥಕುಸುಮ ಅರಳುವ ಪ್ರಸಕ್ತಿಯೇ ಇರಲಿಲ್ಲ. ಹೀಗಾಗಿ ಭಗವತ್ತೋಷ, ಸಜ್ಜನರ ಮೇಲಿನ ಕೃಪೆ ಇವೆರಡು ಈ ಗ್ರಂಥದ ಉದಯಕ್ಕೆ ಕಾರಣ ಎಂದು ತಿಳಿಯಬಹುದು.

ಅಲ್ಲದೆ ಆಚಾರ್ಯರು ಗ್ರಂಥಕರ್ತೃಗಳಾದ ಶ್ರೀವೇದವ್ಯಾಸದೇವರ ಹತ್ತಿರ ಎಲ್ಲ ಮೂಲಗ್ರಂಥಗಳನ್ನು ಅಧ್ಯಯನಮಾಡಿದವರು. ಇದನ್ನು ಆಚಾರ್ಯರ ಸಮಕಾಲೀನರಾದ ಶ್ರೀನಾರಾಯಣಪಂಡಿತಾಚಾರ್ಯರು ತಮ್ಮ ಗ್ರಂಥದಲ್ಲಿ ದಾಖಲಿಸುತ್ತಾರೆ-

ಇತಿಹಾಸಸುಂದರಪುರಾಣಸೂತ್ರಸತ್ತ್ರಿಯಪಂಚರಾತ್ರನಿಜಭಾವಸಂಯುತಮ್ ।
ಅಶೃಣೋದನಂತಹೃದನಂತತೋಽಚಿರಾತ್ ಪರಮಾರ್ಥಮಪ್ಯಗಣಿತಾಗಮಾವಲೇಃ ॥ ೮.೪

**'ನಾರಾಯಣೇನಾಭಿಹಿತೋ ಬದರ್ಯಾಂ ತಸ್ಯೈವ ಶಿಷ್ಯೋ ಜಗದೇಕಭರ್ತುಃ'** ಮ.ಭಾ.ತಾ.ನಿ. ೩೨-೧೫೭ ಎಂದು ಆಚಾರ್ಯರೂ ಗ್ರಂಥದ ಕೊನೆಯಲ್ಲಿ ಈ ಮಾತನ್ನು ಹೇಳುತ್ತಾರೆ. ಆಚಾರ್ಯರು ವೇದವ್ಯಾಸರ ಹೊತ್ತಿಗೆಯ ಹಾರ್ದವನ್ನು ವೇದವ್ಯಾಸದೇವರಿಂದಲೇ ಸಾಕ್ಷಾತ್ತಾಗಿ ಕೇಳಿ ಬಲ್ಲವರು. ಹೀಗಾಗಿ ಆಚಾರ್ಯರು ನಮಗೆ ಎರಕಹೊಯ್ಯುವ ಜ್ಞಾನಧಾರೆ ಅತ್ಯಂತ ಪರಿಶುದ್ಧವಾದುದು. ಅದರಲ್ಲಿ ಯಾವ ಕಲಬೆರಕೆಯೂ ಇಲ್ಲ. ಅದಕ್ಕಾಗಿಯೇ ಶ್ರೀಮಟ್ಟೀಕಾಕೃತ್ಪಾದರ ಮುಖದಿಂದ 'ಶುದ್ಧಂ ಪ್ರಮಾಣಂ ಸ ಮೇ' ಎಂಬ ಮಾತು ಹೊರಹೊಮ್ಮಿತು. ಆದ್ದರಿಂದಲೇ ಇಂತಹ ಪರಿಶುದ್ಧವಾದ ಜ್ಞಾನಗಂಗೆಯಲ್ಲಿ ಮಹಾಮಹಿಮರಾದ ದೇವತೆಗಳೂ ಮಿಂದು ಮೈಮರೆಯುತ್ತಾರೆ.

**ಇತಿಹಾಸದ ಪ್ರತ್ಯಕ್ಷದರ್ಶಿಗಳು**

ಇದಲ್ಲದೆ ಆಚಾರ್ಯರು ರಾಮಾಯಣಮಹಾಭಾರತದ ಕಾಲದಲ್ಲಿ ಘಟಿಸಿದ ಎಲ್ಲ ವೃತ್ತಾಂತಗಳನ್ನು ಪ್ರತ್ಯಕ್ಷಸಾಕ್ಷಿಯಾಗಿ ನಿಂತು ನೋಡಿದವರು. ಇದಿಷ್ಟೇ ಅಲ್ಲ. ಹಿಂದೆ ಅನೇಕಕಲ್ಪಗಳಲ್ಲಿ ಆಗಿ ಹೋದ ರಾಮಾಯಣ-ಮಹಾಭಾರತದ ಘಟನೆಗಳನ್ನೂ, ಅವುಗಳಲ್ಲಿ ಆದ ಅವಾಂತರ ವ್ಯತ್ಯಾಸವನ್ನು ತಿಳಿದವರು. ಇದನ್ನು ಆಚಾರ್ಯರ ಸಾಕ್ಷಾತ್ ಶಿಷ್ಯರಾದ ತ್ರಿವಿಕ್ರಮಪಂಡಿತಾಚಾರ್ಯರು

ರಾಮಕ್ರೀಡಾಮನುವಿಹರತಾ ಪೂರ್ವಮಾಪೂರ್ಣಭಕ್ತ್ಯಾ
ತೇನ ಜ್ಞಾತಾ ನ ಕಿಮು ವಿಮಲಾಸ್ತತ್ಕಥಾಗ್ರಂಥಕೋಟ್ಯಃ ।
ಸೋಽಯಂ ರೇಜೇ ಕುರುಷು ವಿಜಯೀ ಸರ್ವತೋ ಭಾರತಾಗ್ರ್ಯೇ
ಜಾನೀತೇಽತಃ ಪ್ರವಿತತಮತಿಃ ಭಾರತಾರ್ಥಾನ್ ಕೃತಾರ್ಥಃ ॥

ಎಂದು ತತ್ತ್ವಪ್ರದೀಪಿಕೆಯಲ್ಲಿ ಹಾಡಿ ಹೊಗಳಿದ್ದಾರೆ. ಹೀಗೆ ಭಗವಂತನ ಕೃತಿ ಆಕೃತಿಗಳನ್ನು ವ್ಯಕ್ತವಾಗಿ ಕಂಡ, ತಿಳಿದ ಆನಂದತೀರ್ಥಭಗವತ್ಪಾದರೇ ಈ ಗ್ರಂಥನಿರ್ಮಾಣಕ್ಕೆ ಸಮರ್ಥರು.

ಅಂತೆಯೇ ಭಗವಾನ್ ವೇದವ್ಯಾಸದೇವರು, 'ಮಹಾಭಾರತದ ಸರಿಯಾದ ಭಾವವನ್ನು ತಿಳಿಸಲು ಇವರೇ ಸಮರ್ಥರು' ಎಂದರಿತು ಇವರನ್ನೇ ಭಾರತದ ತಾತ್ಪರ್ಯವನ್ನು ತಿಳಿಸಲು ಪ್ರತ್ಯಕ್ಷವಾಗಿ ಚೋದಿಸಿದರು -

ಪಾರಾಶರ್ಯಃ ಪರತತ್ತ್ವಪ್ರಸಿದ್ಧ್ಯೈ ತಾತ್ಪರ್ಯಾರ್ಥಂ ಪರಮಂ ಭಾರತಸ್ಯ ।
ವ್ಯಕ್ತಂ ವಕ್ತುಂ ನಿಯುನಕ್ತಿ ಸ್ಮ ಸಾಕ್ಷಾದೇನಂ ಧನ್ಯಂ ಭುವನೇ ಮನ್ಯಮಾನಃ ॥

**ಇದು ಗ್ರಂಥರಾಜ**

ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ ಶ್ರೀಮದಾಚಾರ್ಯರ ಮೇರುಕೃತಿ. ಈ ಗ್ರಂಥ ಮಹಾಭಾರತದ ಪಡಿನುಡಿ. ಇತಿಹಾಸ-ಪುರಾಣಗಳ ಹಲವು ಬದಿಗಳನ್ನು ಅಂದವಾಗಿ ತೋರಿಸುವ ಅದ್ಭುತಕೃತಿ. ಅವುಗಳ ಹಿನ್ನೆಲೆಯಲ್ಲಿರುವ ತಾತ್ತ್ವಿಕವಿಚಾರಗಳ ವಿವರಣೆಯನ್ನು ನೀಡಿ, ಅದರ ಆಧ್ಯಾತ್ಮಿಕಸೌಂದರ್ಯವನ್ನು ಸೆರೆಹಿಡಿದ ಸುಂದರಕೃತಿ. ಸುಮಾರು ಐದುಸಾವಿರಶ್ಲೋಕಗಳಿಂದ ಕೂಡಿದ ಹಿರಿದಾದ ಕೃತಿ.

'ಅನಂತವಾದ ವೇದಗಳು, ಉಪನಿಷತ್ತು, ಪಂಚರಾತ್ರ, ಪುರಾಣಗಳು, ಮೂಲರಾಮಾಯಣ, ಮಹಾಭಾರತ ಹೀಗೆ ಅಗಾಧವಾದ ವಾಙ್ಮಯಪ್ರಪಂಚವನ್ನು ಮಥನಮಾಡಿ ಈ ಗ್ರಂಥವನ್ನು ರಚಿಸಿದೆ' ಎಂದು ಆಚಾರ್ಯರೇ ಇದರ ಹಿನ್ನೆಲೆಯನ್ನು ತಿಳಿಸುತ್ತಾರೆ. ಇದು ಎಲ್ಲ ಶಾಸ್ತ್ರಗಳ ಆಂತರ್ಯವನ್ನು ಸ್ಫುಟವಾಗಿ ನಿರೂಪಿಸುತ್ತದೆ. ಎಲ್ಲ ಶಾಸ್ತ್ರಗಳ ಅರ್ಥಗಳನ್ನು ನಿರ್ಣಯಿಸುವ ಮಹಾಗ್ರಂಥ. ಮೂಲಗ್ರಂಥಗಳ ಆಧಾರದಿಂದ, ನಿರ್ಣಯಗ್ರಂಥಗಳನ್ನು ಅನುಸರಿಸಿ, ಅನೇಕಕಲ್ಪಗಳಲ್ಲಿ ನಡೆದ ಘಟನೆಗಳ ಸಮನ್ವಯವನ್ನು ಇಲ್ಲಿ ಕಾಣುತ್ತೇವೆ.

ಸಮಗ್ರವೇದಗಳು, ಲಕ್ಷಶ್ಲೋಕಾತ್ಮಕವಾದ ಮಹಾಭಾರತ, ನಾಲ್ಕುಲಕ್ಷಶ್ಲೋಕಾತ್ಮಕವಾದ ಪುರಾಣ, ಪಂಚರಾತ್ರಾಗಮ ಇವುಗಳಲ್ಲಿ ಬರುವ ಕಥೆಗಳನ್ನು ಹಾಗೂ ಪ್ರಮೇಯಗಳನ್ನು ಕೇವಲ ಐದುಸಾವಿರ ಶ್ಲೋಕಗಳಲ್ಲಿ ಸಂಗ್ರಹಮಾಡಿದ ಅದ್ಭುತ ಕೃತಿ.

ಆದ್ದರಿಂದಲೇ ಈ ಗ್ರಂಥದಲ್ಲಿ ಬರುವ 'ಚ' 'ತು' 'ಅಪಿ' 'ಹಿ' ಮೊದಲಾದ ಪ್ರತಿಯೊಂದು ಅಕ್ಷರಗಳು ಒಂದು ಹೊಸದಾದ ಕಥೆಯನ್ನು ಹೇಳುತ್ತವೆ. ಅದ್ಭುತವಾದ ನಿರ್ಣಯಗಳಿಗೆ ನಾಂದಿಹಾಡುತ್ತವೆ. ಜೊತೆಗೆ ಸಮಗ್ರವಾದ ವೇದ-ವೈದಿಕವಾಙ್ಮಯಗಳನ್ನು ತಿಳಿಯುವದಕ್ಕೆ ಹೊಸದಾದ ದೃಷ್ಟಿಕೋನವನ್ನು ಕೊಡಲು ಅತ್ಯಂತ ಸಮರ್ಥವಾಗಿವೆ. ಈ ಗ್ರಂಥಮಾತ್ರವಲ್ಲ ಆಚಾರ್ಯರ ಯಾವುದೇ ಗ್ರಂಥವನ್ನು ಪಕ್ಷಪಾತವಿಲ್ಲದೆ ಅಧ್ಯಯನಮಾಡುವ ವ್ಯಕ್ತಿಗೆ ಈ ಅನುಭವ ಸಾಕ್ಷಿಸಿದ್ಧ. ಶ್ರೀಮದಾಚಾರ್ಯರು ಕೊಟ್ಟ ಹೊಸ ದೃಷ್ಟಿಯಿಂದ ಮೂಲಗ್ರಂಥಗಳನ್ನು ಅಧ್ಯಯನ ಮಾಡುವ ವ್ಯಕ್ತಿಗೆ ಎಂದಿಗೂ ಅವುಗಳ ಬಗ್ಗೆ ಅಗೌರವ, ಅಶ್ರದ್ಧೆ ಅನಾದರ ಬರುವ ಪ್ರಸಂಗವೇ ಇಲ್ಲ. ಪ್ರತ್ಯುತ ಗೌರವಾದರಭಕ್ತಿಗಳು ದ್ವಿಗುಣವಾಗುವುದು ನಿಶ್ಚಿತ.

ಈ ಗ್ರಂಥದ ಅಪೂರ್ವತೆಗೆ ಕಾರಣವಾದ ಮಹಾಗುಣಗಳನ್ನು ಆಚಾರ್ಯರೇ ಅನೇಕಬಾರಿ ಹೇಳಿದ್ದುಂಟು. 'ಭಗವಂತನ ಅನನ್ಯಸಾಧಾರಣವಾದ ಅನುಗ್ರಹದ ಬಲದಿಂದಲೇ ಈ ಗ್ರಂಥದ ನಿರ್ಮಾಣವಾಗಿದೆ. ಅಷ್ಟೇ ಅಲ್ಲ ಇಲ್ಲಿ ಮಾಡಿರುವ ತತ್ವನಿರ್ಣಯಕ್ಕೆ ಬೇಕಾದ ಯುಕ್ತಿಗಳು, ಬುದ್ಧಿಶಕ್ತಿ, ಅಗಾಧವಾದ ಅರಿವು ಎಲ್ಲವೂ ಆ ಭಗವಂತನ ಪರಮಾನುಗ್ರಹದಿಂದಲೇ ಬಂದದ್ದು' ಎಂಬುದಾಗಿ ಆಚಾರ್ಯರು ಸಾರಿ ಸಾರಿ ಹೇಳುತ್ತಾರೆ. ಕೊನೆಯದಾಗಿ ಅಧ್ಯಯನದ ಫಲವನ್ನು ಹೇಳುವಾಗ 'ಈ ಹಿರಿದಾದ ಹೊತ್ತಿಗೆಯು ಎಲ್ಲರಿಗೂ ಅಪೇಕ್ಷಿತವಾದ ಧರ್ಮ-ಅರ್ಥ-ಕಾಮ-ಮೋಕ್ಷ ಕೊಡುವದರಲ್ಲಿ ಸಂದೇಹವಿಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿ ಭಗವಂತನ ಪ್ರೀತಿಗೆ ಪಾತ್ರನಾಗುವಂತೆ ಮಾಡುತ್ತದೆ' ಎಂದು ಹೇಳುತ್ತಾರೆ. ಈ ರೀತಿ ಇದೊಂದು ಅಮೂಲ್ಯವಾದ ಕೃತಿ. ವೇದ-ಭಾರತ-ಪಂಚರಾತ್ರ-ಪುರಾಣ ಮೊದಲಾದ ವಾಙ್ಮಯವನ್ನು ತಲಸ್ಪರ್ಶಿಯಾಗಿ ಅಧ್ಯಯನಮಾಡಿದವರಿಗೆ ಮಾತ್ರ ಆಚಾರ್ಯರ ಈ ಮೆರುಕೃತಿಯ 'ಕಿರುಪರಿಚಯ' ಆಗಬಹುದು.

ಈ ಗ್ರಂಥ ಮೇಲ್ನೋಟಕ್ಕೆ ಕೇವಲ ಪುರಾಣಕಥೆಗಳನ್ನು ಹೇಳುವುದಕ್ಕೆ ಹೊರಟಂತೆ ತೋರುತ್ತದೆ. ಆಳದಲ್ಲಿ ಇಳಿದಾಗ ಮಾತ್ರ ಪ್ರತಿಯೊಂದು ಶಬ್ದವೂ, ಇತಿಹಾಸಪುರಾಣಗಳಲ್ಲಿ ಕಾಣುವ ವಿರೋಧಗಳನ್ನು ಪರಿಹರಿಸುವ ನಿರ್ಣಯಾತ್ಮಕವಾದ ಶಬ್ದ.

ಇದನ್ನೋದುವ ಮುನ್ನ ಚತುಸ್ಸೂತ್ರೀರೂಪವಾದ ಒಂದು ಸಂವಿಧಾನವನ್ನು ಆಚಾರ್ಯರು ನಮ್ಮ ಕೈಯ್ಯಲ್ಲಿಡುತ್ತಾರೆ. ಗ್ರಂಥಸಂಶೋಧನೆಗೆ ಅವು ಇತಿಕರ್ತವ್ಯತಾರೂಪಗಳೂ ಹೌದು.

ಸಂಶೋಧನಪ್ರಜ್ಞೆ ಇರುವವನಿಗೆ ತತ್ತ್ವಾನ್ವೇಷಣೆ ಮುಖ್ಯಉದ್ದೇಶ್ಯ. ತತ್ತ್ವಾನ್ವೇಷಣೆ ಅಥವಾ ತತ್ವನಿರ್ಣಯ ಪಾಠಶುದ್ಧಿ ಹಾಗೂ ಅರ್ಥಶುದ್ಧಿಯಿಂದ ಮಾತ್ರ ಸಾಧ್ಯ. ಅದರಲ್ಲಿ ಪಾಠಶುದ್ಧಿಗಿಂತಲೂ ಅರ್ಥದ ಅರಿವು ಶುದ್ಧವಾದ ತತ್ತ್ವಜ್ಞಾನಕ್ಕೆ ಅಂತರಂಗಸಾಧನ. ಶುದ್ಧವಾದ ಪಾಠವಿದ್ದರೂ ಕಥೆಯನ್ನಾಗಲಿ ತತ್ವವನ್ನಾಗಲಿ ತಪ್ಪಾಗಿ ತಿಳಿಯುವ ಸಾಧ್ಯತೆ ಇದೆ. ಸಂಶೋಧಕನಾದವನು ಎರಡನ್ನೂ ಸರಿಯಾಗಿ ತಿಳಿದು ತತ್ವನಿರ್ಣಯ ಮಾಡಿಕೊಳ್ಳಬೇಕು. ಸಂಶೋಧಕನು ಶುದ್ಧಪಾಠದ ಸಂಪಾದನೆ ಮಾಡುವಾಗ ಗಮನಿಸಬೇಕಾದ ಅಂಶಗಳನ್ನು ಒಂದೆಡೆಗೆ ಸೇರಿಸಿ ಹೇಳುತ್ತಾರೆ.

ಕ್ವಚಿದ್ ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ ।
ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ ಕ್ವಚಿದನ್ಯಥಾ ॥

ಅನುತ್ಪನ್ನಾ ಅಪಿ ಗ್ರಂಥಾ ವ್ಯಾಕುಲಾ ಇತಿ ಸರ್ವಶಃ ।
ಉತ್ಪನ್ನಾಃ ಪ್ರಾಯಶಃ ಸರ್ವೇ ಕೋಟ್ಯಂಶೋಽಪಿ ನ ವರ್ತತೇ ॥

ಗ್ರಂಥೋಽಪ್ಯೇವಂ ವಿಲುಲಿತಃ.................. ॥ ಮ.ಭಾ.ತಾ.ನಿ.೨.೩-೫

ಶುದ್ಧಪಾಠ ಸಿಗದಿರುವುದಕ್ಕೆ ನಾಲ್ಕುಕಾರಣಗಳನ್ನು ಆಚಾರ್ಯರು ಮೇಲೆ ತೋರಿಸುತ್ತಾರೆ. ಪ್ರಕ್ಷೇಪ, ವಿಕ್ಷೇಪ, ವ್ಯತ್ಯಾಸ ಹಾಗೂ ಪ್ರಮಾದ.

**ಕ್ವಚಿದ್ ಗ್ರಂಥಾನ್ ಪ್ರಕ್ಷಿಪಂತಿ**

ಅದರಲ್ಲಿ ಪ್ರಕ್ಷೇಪ ಎಂದರೆ ತಾವು ತಿಳಿದದ್ದು ಎಲ್ಲರೂ ನಂಬಲಿ ಎನ್ನುವ ದುರುದ್ದೇಶದಿಂದ ಆ ವಿಷಯಗಳನ್ನು ಶ್ಲೋಕಗಳಲ್ಲಿ ಹೆಣೆದು ಪ್ರಾಚೀನಗ್ರಂಥಗಳಲ್ಲಿ ಸೇರಿಸುವರು. ಇದಕ್ಕೆ ಮಹಾಭಾರತದಲ್ಲಿ ನೂರಾರು ದೃಷ್ಟಾಂತಗಳನ್ನು ನೋಡಬಹುದು. ಪುರಾಣಗಳಂತೂ ಪ್ರಕ್ಷೇಪಗಳ ಆಕರ. ಯಾವ ಪಾಠ ಪ್ರಕ್ಷಿಪ್ತ ಯಾವ ಪಾಠ ಪ್ರಾಮಾಣಿಕ ಎಂದು ನಿರ್ಣಯಮಾಡುವದೂ ಬಹುಕ್ಲಿಷ್ಟ ಕ್ಷೇತ್ರಮಾಹಾತ್ಮ್ಯದಿಂದ ಆರಂಭಗೊಂಡು ಮತೀಯವಿಷಯಗಳ-ವರೆಗೆ ಎಲ್ಲವೂ ಪುರಾಣಗಳಲ್ಲಿ ಸೇರ್ಪಡೆಯಾದದ್ದುಂಟು.

ವಾಲ್ಮೀಕಿರಾಮಾಯಣವೂ ಇದಕ್ಕೆ ಹೊರತಾಗಿಲ್ಲ. ಅಲ್ಲಿಯ ಒಂದು ಪ್ರಸಂಗವನ್ನು ನೋಡೋಣ. ಸಮುದ್ರತರಣಪ್ರಸಂಗ. ಸಮುದ್ರವನ್ನು ಹಾರಿ ತೆರಳುವದರಲ್ಲಿ ನಿಮ್ಮ ಸಾಮರ್ಥ್ಯ ಎಷ್ಟು ? ಎಂಬುದಾಗಿ ಜಾಂಬವಂತ ಕಪಿಗಳಿಗೆ ಪ್ರಶ್ನಿಸಿದ. ಆಗ ಕಪಿಗಳು ಹತ್ತುಯೋಜನದಿಂದಾರಂಭಿಸಿ ನೂರುಯೋಜನದವರೆಗೆ ಹಾರುವ ಸಾಮರ್ಥ್ಯವಿದೆ ಎಂದು ಹೇಳಿದರು. ಅವರಲ್ಲಿ ಸುಷೇಣನ ಮಗನಾದ ತಾರ ಎಂಭತ್ತು ಯೋಜನದವರೆಗೂ ಹಾರುವ ಸಾಮರ್ಥ್ಯವಿದೆಯೆಂದು ಹೇಳಿದ. ಆದರೆ ಮುದ್ರಿತವಾದ ರಾಮಾಯಣದ ಪ್ರಕಾರ **'ಸುಷೇಣಸ್ತು ಮಹಾತೇಜಾ ಸತ್ವವಾನ್ ಕಪಿಸತ್ತಮಃ । ಅಶೀತಿಂ ಪ್ರತಿಜಾನೇಽಹಂ ಯೋಜನಾನಾಂ ಪರಾಕ್ರಮೇ ॥'** ೪.೬೫.೯. 'ಸುಷೇಣ ಎಂಭತ್ತು ಯೋಜನ ಹಾರುವದಾಗಿ ಉತ್ತರಿಸಿದ' ಎಂದು ಹೇಳುವ ಮಾತು ನಮಗೆ ಉಪಲಬ್ಧವಾಗುತ್ತದೆ. ಸಮಗ್ರವಾದ ಈ ಶ್ಲೋಕ ಪ್ರಕ್ಷಿಪ್ತವಾದದ್ದು. ಸುಷೇಣ ಸೀತಾನ್ವೇಷಣೆಗಾಗಿ ದಕ್ಷಿಣದಿಕ್ಕಿಗೆ ಬರಲೇ ಇಲ್ಲ. ಸುಗ್ರೀವ ಅವನನ್ನು ಪಶ್ಚಿಮದಿಕ್ಕಿಗೆ ಕಳುಹಿಸಿದ್ದ. **'ತಾರಾಯಾಃ ಪಿತರಂ ರಾಜಾ ಶ್ವಶುರಂ ಭೀಮವಿಕ್ರಮಮ್ ।...ಪ್ರತೀಚೀಮಾದಿಶದ್ದಿಶಮ್ ॥'** ಎಂದು ಹಿಂದೆ ವಾಲ್ಮೀಕಿರಾಮಾಯಣದಲ್ಲಿ ಬಂದ ವಿವರಣೆ. ಮಧುಸೂದನಭಿಕ್ಷುಗಳು ಮಾತ್ರ ನಮಗೆ ಶುದ್ಧವಾದ ಪಾಠವನ್ನು ಕೊಡುತ್ತಾರೆ. **'ಸುಷೇಣಸೂನುಶ್ಚಾಶೀತಿಂ ಪ್ರೋಕ್ತವಾನ್ ಕಪಿಸತ್ತಮಾನ್ ॥'** ಎಂಬುದಾಗಿ ಅವರು ಉದಾಹರಿಸಿದ ಶ್ಲೋಕ. ಆ ಶ್ಲೋಕದ ಪ್ರಕಾರ 'ಸುಷೇಣನ ಮಗನಾದ ತಾರ ಎಂಭತ್ತುಯೋಜನ ಹಾರಲು ಸಮರ್ಥ' ಎಂದು ಹೇಳಿದ. ಇದು ನಿಜವಾಗಿ ಹಿಂದಿನ ಮುಂದಿನ ಪ್ರಸಂಗಗಳಿಗೆ ಹೊಂದುವ ಅರ್ಥ. ಈ ಮಾತು ಆಚಾರ್ಯರಿಗೂ ಸಮ್ಮತ. **'ಸನೀಲಮೈಂದದ್ವಿವಿದಾಃ ಸತಾರಾಃ ಸರ್ವೇಽಪ್ಯಶೀತ್ಯಾಃ ಪರತೋ ನ ಶಕ್ತಾಃ'** ಮ.ಭಾ.ತಾ.ನಿ ೬-೫೩ಎಂದು ಆಚಾರ್ಯರು ಹೇಳುತ್ತಾರೆ. ಹೀಗಾಗಿ ಪ್ರಾಚೀನಲೇಖಕರ ಪ್ರಮಾದದಿಂದಾಗಿ ಮುದ್ರಿತವಾದ ಪುಸ್ತಕದಲ್ಲಿ ಸೇರಿಹೋದ ಶ್ಲೋಕ ಇದು. ಈ ರೀತಿ ಪ್ರಾಚೀನಗ್ರಂಥಗಳಲ್ಲಿ ಸಾವಿರಾರು ಪ್ರಕ್ಷೇಪಗಳಾದದ್ದನ್ನು ನಾವು ಕಾಣುತ್ತೇವೆ.

**ಕ್ವಚಿದಂತರಿತಾನಪಿ**

ಕೆಲ ಪ್ರಸಂಗಗಳಲ್ಲಿ ಗ್ರಂಥದಲ್ಲಿ ಇರುವುದನ್ನು ದುರುದ್ದೇಶದಿಂದ ತೆಗೆದು ಹಾಕುತ್ತಾರೆ. ಸೀತೆಯ ವಿವಾಹವಾದ ಮೇಲೆ ರಾಮಪರಶುರಾಮ ಪರಸ್ಪರಭೇಟಿಯಾದ ಪ್ರಸಂಗ. ಶ್ರೀರಾಮದೇವರಿಂದ ವೈಷ್ಣವಧನುಸ್ಸಿನಲ್ಲಿ ಶರಸಂಧಾನ. ಶ್ರೀರಾಮದೇವರು ಪರಶುರಾಮದೇವರ ಮೇಲೆ ಶರಪ್ರಯೋಗ ಮಾಡದೆ ನಿನ್ನ ಲೋಕಗಳನ್ನು ನಾಶಮಾಡುತ್ತೇನೆ ಎಂದು ಹೇಳಿ ಲೋಕಗಳನ್ನು ಸಂಹಾರಮಾಡುವರು. ಇಷ್ಟು ಕಥೆ ನಮಗೆ ವಾಲ್ಮೀಕಿರಾಮಾಯಣ ಹಾಗೂ ಇನ್ನಿತರ ಪುರಾಣಗಳಲ್ಲಿ ಸಿಗುತ್ತದೆ. ಪುರಾಣಗಳಲ್ಲಿ ಬರುವ 'ರಾಮನು ಪರಶುರಾಮನನ್ನು ಸೋಲಿಸಿದ' 'ಪರಶುರಾಮನಲ್ಲಿರುವ ವೈಷ್ಣವತೇಜಸ್ಸು ರಾಮನಲ್ಲಿ ಸೇರಿತು' 'ಪರಶುರಾಮ ತಪಸ್ಸಿನಿಂದ ಸಂಪಾದಿಸಿದ ಲೋಕಗಳನ್ನು ಸಂಹರಿಸಿದ' ಇತ್ಯಾದಿ ಮಾತುಗಳು ಸಾಕ್ಷಾತ್ ಭಗವದವತಾರರಾದ ಪರಶುರಾಮದೇವರ ವಿಷಯದಲ್ಲಿ ಹೊಂದಾಣಿಕೆಯಾಗುವದಿಲ್ಲ.

ಆದಕ್ಕಾಗಿ ಆಚಾರ್ಯರು ಅನೇಕಪುರಾಣಗಳಲ್ಲಿ ಬರುವ ಮಾತಿನ ಬೆಳಕಿನಲ್ಲಿ ಇದರ ಹಿನ್ನೆಲೆಯನ್ನು ತಿಳಿಸಿರುವರು - ಅತುಲ ಎಂಬ ಅಸುರನು ಹಿಂದೆ ಬ್ರಹ್ಮರುದ್ರರ ವರದಿಂದ ಲೋಕಗಳಲ್ಲಿ ವ್ಯಾಪಿಸಿ ಇದ್ದನು. ಇನ್ನೊಮ್ಮೆ ಅತುಲನು ತಾನು ಅವಧ್ಯನಾಗುವದಕ್ಕಾಗಿ ತಪಸ್ಸು ಮಾಡಿದಾಗ ಬ್ರಹ್ಮರುದ್ರರು 'ಶ್ರೀಹರಿಯು ಪರಾಜಿತನಾದಾಗ ನಿನ್ನ ಮರಣ' ಎಂದು ವರವಿತ್ತರು. ಶ್ರೀಹರಿಯ ಪರಾಜಯ ಅಸಾಧ್ಯ. ಆದ್ದರಿಂದ ನಾನು ಅವಧ್ಯ ಎಂದೇ ಅತುಲನು ಭಾವಿಸಿದ. ಇನ್ನೊಂದು ಪ್ರಸಂಗದಲ್ಲಿ ಅತುಲನು ಮೋಕ್ಷದ ಅಪೇಕ್ಷೆಯಿಂದ ರುದ್ರದೇವರನ್ನು ಕುರಿತು ತಪಸ್ಸು ಮಾಡಿದಾಗ ದೇವರ ದೇಹದಲ್ಲಿ ಪ್ರವೇಶಿಸುವ ವರವನ್ನು ರುದ್ರದೇವರು ಕೊಟ್ಟರು. ಹೀಗೆ ಬ್ರಹ್ಮರುದ್ರರ ವರದಿಂದ ಲೋಕವ್ಯಾಪ್ತನಾದ, ತಪೋಮಯನಾದ, ವಿಷ್ಣುವಿನ ದೇಹದಲ್ಲಿರುವ ಅತುಲ ಎನ್ನುವ ಅಸುರನನ್ನು ಶ್ರೀರಾಮನು ಬಾಣದಿಂದ ಸಂಹರಿಸಿದ. ಇವನ ಸಂಹಾರಕ್ಕಾಗಿಯೇ ಪರಶುರಾಮದೇವರು ಸೋತವರಂತೆ ತೋರಿದರು. ವಾಸ್ತವಿಕವಾಗಿ ಸೋಲಲಿಲ್ಲ. ಭಗವಂತ ಮೇಲ್ನೋಟಕ್ಕೆ ತೋರಿದ ಸೋಲನ್ನೇ ಪುರಾಣಗಳು ಹಾಗೂ ವಾಲ್ಮೀಕಿರಾಮಾಯಣ ದರ್ಶನಭಾಷೆಯಲ್ಲಿ ಹೇಳಿವೆ. ಇಷ್ಟು ರಾಮ-ಪರಶುರಾಮರ ಭೇಟಿಯ ಹಿನ್ನೆಲೆಯನ್ನು ಆಚಾರ್ಯರು ನಮಗೆ ತಿಳಿಸಿದ್ದು.

ಶ್ರೀಮದಾಚಾರ್ಯರು ನೀಡಿದ ಈ ಅಪೂರ್ವವಿವರಗಳನ್ನು ಸ್ಫುಟವಾಗಿ ನಿರೂಪಿಸುವ ಪುರಾಣವಾಕ್ಯಗಳನ್ನು ಮಧುಸೂದನಭಿಕ್ಷುಗಳು ತಮ್ಮ 'ಪ್ರಮಾಣಸಂಗ್ರಹ' ಎನ್ನುವ ವ್ಯಾಖ್ಯಾನದಲ್ಲಿ ಉದಾಹರಿಸುತ್ತಾರೆ. ಒಬ್ಬ ಲಿಪಿಕಾರನ ಕೈವಾಡದಿಂದಾಗಿಯೋ ಅಥವಾ ಪ್ರಮಾದದಿಂದಾಗಿಯೋ ಇವತ್ತು ಉಪಲಬ್ಧವಾದ ಪದ್ಮಪುರಾಣದಲ್ಲಿ ಈ ಭಾಗ ನಮಗೆ ಸಿಗುವದಿಲ್ಲ. ಲಿಪಿಕಾರರ ಈ 'ಕೈಚಳಕ' ಸಾವಿರಾರು ವರ್ಷಗಳಿಂದ ನಡೆದು ಬಂದಿದೆ. ಇತಿಹಾಸಪುರಾಣವಾಙ್ಮಯಗಳಿಗೆ ಆದ ಈ ಅನ್ಯಾಯವನ್ನು ಸರಿಪಡಿಸುವದಕ್ಕಾಗಿಯೇ ಆಚಾರ್ಯರ ಪರಿಷ್ಕೃತವಾದ ಸಂಶೋಧನಾತ್ಮಕ ಈ ಗ್ರಂಥ ಹೊರಟಿದೆ.

**ಕುರ್ಯುಃ ಕ್ವಚಿಚ್ಚ ವ್ಯತ್ಯಾಸಮ್**

ವ್ಯತ್ಯಾಸ ಎರಡು ತರಹ. ಮೊದಲನೆಯದು ವೇದವ್ಯಾಸದೇವರು, ಋಷಿಗಳು ಮೊದಲಾದ ಗ್ರಂಥಕಾರರೇ ಅಸುರರ ಮೋಹನಕ್ಕಾಗಿ ಕಥೆಗಳಲ್ಲಿ ಮಾಡುವ ವ್ಯತ್ಯಾಸಗಳು. ಇದು ಸರ್ವಥಾ ಅಪಚಾರವಲ್ಲ.

ಎರಡನೆಯದು ತಿಳಿದವರು ದುರುದ್ದೇಶಪೂರ್ವಕವಾಗಿ ಕಥೆಗಳಲ್ಲಿ ಮಾಡುವ ವ್ಯತ್ಯಾಸ. ಇದು ಅಪಚಾರ. ತಿಳಿಯದವರಂತೂ ಸರಿಯೆ.

**ಉದಾ-** ಕುಂಭಕರ್ಣ ಸುಗ್ರೀವಾದಿಗಳ ಯುದ್ಧಪ್ರಸಂಗ. ಸುಗ್ರೀವ ಕುಂಭಕರ್ಣನ ಮೇಲೆ ಪರ್ವತವನ್ನೆಸೆದ. ಕುಂಭಕರ್ಣ ಆ ಪರ್ವತವನ್ನೇ ಪುನಃ ಸುಗ್ರೀವನ ಮೇಲೆಸೆದ. ಆದರಿಂದಾಗಿ ಸುಗ್ರೀವ ಮೂರ್ಛೆಹೋದ. ನಂತರ ಕುಂಭಕರ್ಣ ಜಾಂಬವಂತ-ಅಂಗದರನ್ನು ಅಂಗೈಯಿಂದ ಹೊಡೆದು ಬೀಳಿಸಿದ. ಬಳಿಕ ಮೂರ್ಛೆಹೋದ ಸುಗ್ರೀವನನ್ನು ಅಪಹರಿಸಿ ಲಂಕೆಗೆ ಹೊರಟ. ಎಚ್ಚತ್ತ ಸುಗ್ರೀವ ಕುಂಭಕರ್ಣನ ಕಿವಿ ಹಾಗು ಮೂಗುಗಳನ್ನು ಕತ್ತರಿಸಿದ. ಆಗ ಕುಂಭಕರ್ಣ ಅಮೋಘವಾದ ಶೂಲದಿಂದ ಸುಗ್ರೀವನನ್ನು ಕೊಲ್ಲಲು ಬಂದ. ಆ ಸಮಯದಲ್ಲಿ ನೊಣದಂತೆ ಚಿಕ್ಕದಾದ ರೂಪವನ್ನು ತಾಳಿದ್ದ ಹನುಮಂತ ಅಮೋಘವಾದ ಶೂಲವನ್ನು ತನ್ನ ತೊಡೆಯಮೇಲೆ ಹಾಕಿಕೊಂಡು ಮುರಿದ.

ಮೇಲೆ ಹೇಳಿದ ಈ ಕ್ರಮ ಆಚಾರ್ಯರು ಅನೇಕಪುರಾಣಗಳನ್ನು ಅವಲೋಕಿಸಿ ನಿರ್ಣಯಿಸಿದ ಕ್ರಮ. ಆದರೆ ಆಚಾರ್ಯರ ಅನಂತರದ ಲಿಪಿಕಾರರು ವಾಲ್ಮೀಕಿರಾಮಾಯಣದಲ್ಲಿ ಶೂಲಮುರಿದ ಈ ಪ್ರಸಂಗವನ್ನು ಕುಂಭಕರ್ಣನು ಸುಗ್ರೀವಾಪಹಾರಮಾಡುವ ಮುಂಚೆಯೇ ಸೇರಿಸಿರಬಹುದು. ಅಥವಾ ಹನುಮಂತನ ಪರಾಕ್ರಮವನ್ನು ಕಂಡು ಉತ್ಕಂಠಿತರಾದ ವಾಲ್ಮೀಕಿಋಷಿಗಳೇ ಈ ಪ್ರಸಂಗವನ್ನು ವ್ಯತ್ಯಾಸಮಾಡಿ ಹೇಳಿರಲೂ ಸಾಕು.

ಪುರಾಣಗಳಲ್ಲಿ ಹಾಗೂ ಉಪಲಬ್ಧವಾಲ್ಮೀಕಿರಾಮಾಯಣದಲ್ಲಿ ಪ್ರಮಾದಾದಿಗಳಿಂದಾಗಿ ಕಂಡುಬರುವ ಈ ತರಹದ ವ್ಯತ್ಯಾಸಗಳು ಅತ್ಯಲ್ಪವಾಗಿರಬಹುದು. ಆದರೆ ಈ ತರಹದ ವ್ಯತ್ಯಾಸಗಳೂ ಓದುಗರಿಗೆ ಅನರ್ಥಸಾಧನವಾಗಿವೆ. ಈ ಮಾತು ಭಾಗವತತಾತ್ಪರ್ಯದಲ್ಲಿ ಆಚಾರ್ಯರು ಉದಾಹರಿಸಿದ ವಚನಗಳಿಂದ ತಿಳಿದು ಬರುತ್ತದೆ.

ಈ ತರಹದ ಸಾವಿರಾರು ಪ್ರಸಂಗಗಳನ್ನು ಪುರಾಣಗಳಲ್ಲಿ ಹಾಗೂ ಇನ್ನಿತರ ಗ್ರಂಥಗಳಲ್ಲಿ ಕಾಣಬಹುದು. ಆದ್ದರಿಂದ ಸಂಶೋಧಕನು ಬಹಳ ಎಚ್ಚರದಿಂದ ಈ ಅಂಶಗಳನ್ನು ಗಮನಿಸಿ ಸಂಶೋಧನೆಗೆ ತೊಡಗಬೇಕು ಎನ್ನುವುದು ಆಚಾರ್ಯರ ಕಿವಿಮಾತು.

**ಪ್ರಮಾದಾತ್ ಕ್ವಚಿದನ್ಯಥಾ**

ಸಂಶೋಧಕರು ಅವಶ್ಯ ಗಮನಿಸಬೇಕಾದ ಕೊನೆಯ ಅಂಶ. ಲಿಪಿಕಾರರು ತಮ್ಮ ಮನುಷ್ಯಸಹಜವಾದ ಅಜ್ಞಾನಾದಿಗಳಿಂದ ಮಾಡಿದ ತಪ್ಪು. ಈ ತಪ್ಪಿನಿಂದಾಗಿ ಮೂಲಪಾಠಗಳಲ್ಲಿ ವ್ಯತ್ಯಾಸವಾಗಿ ಅನೇಕ ಅನರ್ಥಗಳಾಗಿವೆ. ಒಂದರ್ಥದಲ್ಲಿ ಪ್ರಾಚೀನಲಿಪಿಕಾರರ ಮಹದುಪಕಾರ ಅವಿಸ್ಮರಣೀಯ. ಅನುಕೂಲಕರವಾದ ಯಾವ ವಾತಾವರಣವಿಲ್ಲದಿದ್ದರೂ ಆಗಾಧವಾದ ಪ್ರಾಚೀನವಾಙ್ಮಯವನ್ನು ಇಂದಿನವರಿಗೆ ತಲುಪುವಂತೆ ಮಾಡಿದ್ದಕ್ಕೆ ನಾವು ಅವರ ಮಹದುಪಕಾರ ಎಂದಿಗೂ ಮರೆಯಲು ಸಾಧ್ಯವಿಲ್ಲ. ಅವರು ಪಟ್ಟ ಶ್ರಮ, ತೋರಿದ ನಿಷ್ಠೆ, ಅಪಾರ ಸಹನಶಕ್ತಿ ಇತ್ಯಾದಿಗಳನ್ನು ತಿಳಿದಾಗ ನಿಜವಾಗಿಯೂ ಅಚ್ಚರಿಮೂಡಿಸುವಂತಹವು. **'ಭಗ್ನಪೃಷ್ಠಕಟಿಗ್ರೀವಸ್ತಬ್ಧದೃಷ್ಟಿರಧೋಮುಖಮ್ । ಕಷ್ಟೇನ ಲಿಖಿತಂ ಗ್ರಂಥಂ ಪುತ್ರವತ್ಪರಿಪಾಲಯೇತ್ ॥'** ಎಂದು ಲಿಪಿಕಾರರ ಪರಿಶ್ರಮವನ್ನು ಸ್ವಲ್ಪಮಟ್ಟಿಗೆ ಪರಿಚಯಿಸುವ ಮಾತುಗಳನ್ನು ಪ್ರಾಚೀನ ಹಸ್ತಪ್ರತಿಗಳಲ್ಲಿ ನಾವು ಕಾಣುತ್ತೇವೆ. ಇರಲಿ, ಅವರು ತಿಳಿಯದೆ ಮಾಡಿದ ತಪ್ಪಿನಿಂದಾಗಿ ಅನೇಕಪ್ರಸಂಗಗಳಲ್ಲಿ ಮಹಾ ಅನರ್ಥಗಳಾದದ್ದನ್ನು ನೋಡುತ್ತೇವೆ. ಎಷ್ಟೋ ಪ್ರಸಂಗಗಳಲ್ಲಿ ನಿಜವಾದ ತತ್ತ್ವವೂ ತಿಳಿಯದಂತಾಗಿ ಶಾಬ್ದಿಕಕಸರತ್ತಿನಲ್ಲಿಯೇ ಮುಳುಗಿ ಶುದ್ಧವಾದ ಜ್ಞಾನ ಕಳೆದುಕೊಳ್ಳುವದೂ ಉಂಟು. ಇಂಥಹ ತಪ್ಪುಗಳ ವಿಷಯದಲ್ಲಿ ಎಚ್ಚರದಿಂದಿರಬೇಕೆಂದು ಆಚಾರ್ಯರು ಹೇಳುತ್ತಾರೆ.

ಹೀಗೆ ಗ್ರಂಥಸಂಶೋಧನೆಗೆ ಚತುಸ್ಸೂತ್ರೀರೂಪವಾದ ಒಂದು ಹೊಸ ಸಂವಿಧಾನವನ್ನು ಆಚಾರ್ಯರು ಅಂದೇ ಬರೆದಿಟ್ಟರು. ಸಂಶೋಧನೆಗೆ ಹೊಸದಾದ ಮೂರ್ತರೂಪವನ್ನು ಕೊಟ್ಟ ಮಹಾನುಭಾವರಿವರು. ಎಂತಹ ಆಧುನಿಕಸಂಶೋಧಕರೂ ಬೆರಗಾಗಿ ಬೆರಳು ಕಚ್ಚುವಂತಹ ಹೊಸ ದಿಗಂತವನ್ನೇ ಸೃಷ್ಟಿಮಾಡಿದ ಏಕೈಕ ಆಚಾರ್ಯರು ಶ್ರೀಮದಾನಂದತೀರ್ಥರು.

**ಶುದ್ಧ ಅರ್ಥದ ನಿರ್ಣಯಕ್ಕೆ ಮಾರ್ಗದರ್ಶನ**

……………..ಕಿಮ್ವರ್ಥೋ ದೇವದುರ್ಗಮಃ ||
ಕಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ |
ಹರಿಣಾ ನಿರ್ಣಯಾನ್ ವಚ್ಮಿ ವಿಜಾನನ್ ತತ್ಪ್ರಸಾದತಃ ||

ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್ |
ಯಥಾ ಸ ಭಗವಾನ್ ವ್ಯಾಸಃ ಸಾಕ್ಷಾನ್ನಾರಾಯಣಃ ಪ್ರಭುಃ ||

ಜಗಾದ ಭಾರತಾದ್ಯೇಷು ತಥಾ ವಕ್ಷ್ಯೇ ತದೀಕ್ಷಯಾ |
ಸಂಕ್ಷೇಪಾತ್ ಸರ್ವಶಾಸ್ತ್ರಾರ್ಥಂ ಭಾರತಾರ್ಥಾನುಸಾರತಃ ||
ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂ ಪರಿಕೀರ್ತಿತಮ್ || ಮ.ಭಾ.ತಾ.ನಿ ೨.೫-೯

ವೇದಗಳಲ್ಲಿ ಹೇಳಿದ ತತ್ತ್ವಗಳ ಪರಿಪೂರ್ಣವಾದ ಜ್ಞಾನ ಇತಿಹಾಸಪುರಾಣಗಳ ನೆರವಿನಿಂದಲೇ ಆಗುವದು. ಆದಕ್ಕಾಗಿ ಇತಿಹಾಸಪುರಾಣಗಳ ಅಧ್ಯಯನ ಅನಿವಾರ್ಯ. ಮೇಲೆ ಹೇಳಿದಂತೆ ಇವತ್ತಿಗೆ ಉಪಲಬ್ಧವಾದ, ನಮ್ಮ ಕೈಗೆಟುಕಿದ ಅಲ್ಪಸ್ವಲ್ಪ ವೇದಭಾಗ, ಭಾರತಪುರಾಣಮೊದಲಾದ ಗ್ರಂಥಗಳು ತಿಳಿದವರ ತಿಳಿಯದವರ ತಿಳಿಗೇಡಿತನದಿಂದಾಗಿ ವಿಕೃತವಾದ ಸ್ವರೂಪವನ್ನು ಪಡೆದಿವೆ. ಕಣ್ಣಿಗೆ ಕಾಣದೆ ಉಳಿದ, ನಮ್ಮ ಕೈತಲುಪದ ಗ್ರಂಥಗಳು ನೂರುಕೋಟಿಶ್ಲೋಕಾತ್ಮಕವಾದ ಮೂಲರಾಮಾಯಣ, ಅಷ್ಟೇ ಸಂಖ್ಯೆಯ ಪಂಚರಾತ್ರ, ನೂರುಕೋಟಿಶ್ಲೋಕಾತ್ಮಕವಾದ ಪುರಾಣ, ಅನಂತವಾದ ವೇದಗಳು ಹೀಗೆ ಅನಂತಾನಂತಶಬ್ದರಾಶಿ ಇದೆ. ಹೀಗೆ ಉಪಲಬ್ಧವಿರುವ ಉಪಲಬ್ಧವಿರದ ಸಮಗ್ರಗ್ರಂಥರಾಶಿಯ ಕೋಟ್ಯಂಶವೂ ನಮಗೆ ಉಳಿದಿಲ್ಲ.

ಹೀಗೆ ಗ್ರಂಥಗಳ ಸ್ವರೂಪವೇ ವಿಕೃತವಾದಾಗ ದೇವಾಧಿದೇವತೆಗಳಿಗೂ ಒಗಟಾಗಿಯೇ ಉಳಿದ ಅರ್ಥಗಳ ಬಗೆಗೆ ಹೇಳುವುದೇನು? ಅದಕ್ಕಾಗಿಯೇ 'ಕಾಲದ ಕೈವಾಡದಿಂದಾಗಿ ವಿಕೃತವಾದ ಗ್ರಂಥಗಳ ನಿಜವಾದ ಆಂತರ್ಯವನ್ನು ತೋರಿಸುವದಕ್ಕಾಗಿ ಶ್ರೀಹರಿಯ ಅಣತಿಯಂತೆ ನಾನು ಎಲ್ಲವನ್ನು ನಿರ್ಣಯಿಸುವೆನು. ಅರ್ಥನಿರ್ಣಯಮಾಡುವದಕ್ಕೆ ಬೇಕಾದ ಎಲ್ಲ ಶಾಸ್ತ್ರಗಳ ಅಪಾರವಾದ ಅರಿವನ್ನು ಅವನ ಅನುಗ್ರಹದಿಂದಲೇ ಪಡೆದಿರುವೆ.' ಹೀಗೆ ಆಚಾರ್ಯರು ಹೇಳುವರು.

**ಇತಿಹಾಸ-ಪುರಾಣಗಳು ಹಾಗೂ ಆಚಾರ್ಯರು**

ಭಾರತೀಯವಾಙ್ಮಯಪ್ರಪಂಚದಲ್ಲಿ ಇತಿಹಾಸಪುರಾಣಗಳು ವಿಶಿಷ್ಟವಾದ ಸ್ಥಾನವನ್ನು ಅಲಂಕರಿಸಿವೆ. ಇತಿಹಾಸಪುರಾಣಪ್ರಸ್ಥಾನಗಳಿಗೆ ಶ್ರೀಮದಾಚಾರ್ಯರ ಕೊಡುಗೆ ಅಪಾರ. ಅವುಗಳ ಅಪಾರ್ಥದಿಂದಾಗುವ ಅನರ್ಥವನ್ನು ಪರಿಹರಿಸಿ ಸರಿಯಾದ ಅರ್ಥವನ್ನು ತಿಳಿಸಿ ಮಹದುಪಕಾರ ಮಾಡಿದ ಏಕೈಕ ಆಚಾರ್ಯರು

ಶ್ರೀಮದಾಚಾರ್ಯರು. ಪ್ರಾಚೀನ ಯಾವ ದಾರ್ಶನಿಕಾಚಾರ್ಯರೂ ಇವುಗಳಡೆಗೆ ಕಣ್ಣೆತ್ತಿ ನೋಡಲಿಲ್ಲ. ಇಲ್ಲಿರುವ ಸಮಸ್ಯೆಗಳಿಗೆ ತಲೆಕೆಡಿಸಿಕೊಂಡು ಉಪಾಯಗಳನ್ನು ಚಿಂತಿಸುವ ಗೋಜಿಗೂ ಹೋಗಲಿಲ್ಲ. ಶ್ರೀಮನ್ಮಧ್ವಾಚಾರ್ಯರಿಗಿಂತ ಮೊದಲಿನ ಎಲ್ಲ ಆಚಾರ್ಯರು ತಮ್ಮ ಸಿದ್ಧಾಂತವನ್ನು ಸಮರ್ಥಿಸಿಕೊಳ್ಳುವದಕ್ಕಾಗಿ ಇತಿಹಾಸಗಳಾದ ಭಾರತ-ರಾಮಾಯಣಾದಿಗಳಿಂದ ಅನೇಕ ವಾಕ್ಯಗಳನ್ನು ಉದಾಹರಿಸುತ್ತಾರೆ. ಆದರೆ ಆ ವಾಙ್ಮಯಪ್ರಪಂಚಕ್ಕೆ ಅವರ ಕೊಡುಗೆಗಳು ಅತ್ಯಲ್ಪ. ಇಂತಹ ಸನ್ನಿವೇಶದಲ್ಲಿ ಆಚಾರ್ಯರು ಪಾಮರರಿಂದ ಪಂಡಿತರವರೆಗೆ ಮಾಡಿದ ಉಪಕಾರ ಅಪಾರ. ಶ್ರೀಮದಾನಂದತೀರ್ಥಭಗವತ್ಪಾದರು ಮಾತ್ರ ಈ ವಾಙ್ಮಯಗಳಿಗೆ ಉನ್ನತವಾದ ಸ್ಥಾನವನ್ನು ನೀಡಿದ ಮಹಾನುಭಾವರು. ಅವರ ದೃಷ್ಟಿಯಲ್ಲಿ ಇತಿಹಾಸ ಎನ್ನುವ ಶಬ್ದ ವಿಶಿಷ್ಟವಾದ ವಾಙ್ಮಯಪ್ರಪಂಚವನ್ನು ಪ್ರತಿಪಾದನ ಮಾಡುತ್ತದೆ.

ಪಂಚರಾತ್ರಂ ಭಾರತಂ ಚ ಮೂಲರಾಮಾಯಣಂ ತಥಾ ।
ಇತಿಹಾಸ ಇತಿ ಪ್ರೋಕ್ತೋ ........................... ॥

ವೇದಾಶ್ಚೇವೇತಿಹಾಸಾಶ್ಚ ಪುರಾಣಂ ಭಾಗವತಂ ತಥಾ ।
ಮೂಲಪ್ರಮಾಣಮುದ್ದಿಷ್ಟಂ ಮೀಮಾಂಸಾ ಚ ತಥೋತ್ತರಾ ॥ಬೃ.ಭಾ.೩.೫

ಆಚಾರ್ಯರ ದೃಷ್ಟಿಯಲ್ಲಿ ಮಹಾಭಾರತ, ಪಂಚರಾತ್ರ, ಮೂಲರಾಮಾಯಣ ಇಷ್ಟು ವಾಙ್ಮಯವನ್ನು ಇತಿಹಾಸ ಎನ್ನುವ ಶಬ್ದದಿಂದ ತೆಗೆದುಕೊಳ್ಳಬೇಕು. ಇವುಗಳಲ್ಲಿ ಹೇಳಿದ ತತ್ವಗಳು ಅಷ್ಟೇ ಅಧಿಕೃತವಾದದು. ಆಚಾರ್ಯರ ದೃಷ್ಟಿಯಲ್ಲಿ ಈ ಅನಂತವಾದ ಆಗಮದಲ್ಲಿರುವ ಒಂದಕ್ಷರವೂ ವ್ಯರ್ಥವಲ್ಲ. ಪ್ರತಿಯೊಂದು ಅಕ್ಷರವೂ ಭಗವಂತನ ಗುಣರಾಶಿಯನ್ನು ತಿಳಿಸುವದಕ್ಕೆ ಹೊರಟಿದೆ. ಯಾರಿಗೆ ಮಾನಸಿಕವಾದ ಪಕ್ವತೆ ಇದೆಯೋ ಅವರಿಗೆ ಅದರ ಅರಿವು. ಒಟ್ಟಾರೆ ಹೇಳುವದಾದರೆ ಅಗಾಧವಾದ ಈ ಶಬ್ದರಾಶಿಗೆ ವಿಷ್ಣುಪಾರಮ್ಯ ಹೇಳುವದೇ ಉದ್ದೇಶ್ಯ. ಈ ಅರ್ಥದಲ್ಲಿ ಬ್ರಹ್ಮಸೂತ್ರಗಳಿಗೂ ಹಾಗೂ ಅಪೌರುಷೇಯವಾದ ವೇದಗಳಿಗೂ ಇತಿಹಾಸಪುರಾಣಗಳಿಗೂ ಏಕರೂಪತೆಯನ್ನು ತೋರಿಸಿದ ಮೊಟ್ಟಮೊದಲಿನ ಆಚಾರ್ಯರು. ಇತಿಹಾಸ ಪುರಾಣಗಳ ನೆರವಿನಿಂದ ವೇದಾರ್ಥವನ್ನು ಉಪಬೃಂಹಣಮಾಡುವ ಹೊಸದಾದ ಕ್ರಮವನ್ನು ಮೊದಲು ತೋರಿಸಿದವರು. ದಾರ್ಶನಿಕಪ್ರಪಂಚದಲ್ಲಿ ಅವುಗಳಿಗೆ ಸುವ್ಯವಸ್ಥಿತವಾದ ಚೌಕಟ್ಟನ್ನು ಹಾಕಿ ಉತ್ತಮಸ್ಥಾನ ನೀಡಿದರು. ಅಂತೆಯೇ ಆಚಾರ್ಯರು -

ಇತ್ಯೇವ ಶ್ರುತಯೋಽಶೇಷಾಃ ಪಂಚರಾತ್ರಮಥಾಖಿಲಮ್ ।
ಮೂಲರಾಮಾಯಣಂ ಚೈವ ಭಾರತಂ ಸ್ಮೃತಯೋಽಖಿಲಾಃ ॥

ವೈಷ್ಣವಾನಿ ಪುರಾಣಾನಿ ಸಾಂಖ್ಯಯೋಗೌ ಪರಾವಪಿ ।
ಬ್ರಹ್ಮತರ್ಕಶ್ಚ ಮೀಮಾಂಸೇತ್ಯನಂತಃ ಶಬ್ದಸಾಗರಃ ॥

.................. .. ಏತಮೇವಾರ್ಥಮುತ್ತಮಮ್ ।
ಅನ್ಯಾವಕಾಶರಹಿತಂ ಪ್ರಕಾಶಯತಿ ಸಾದರಮ್ ॥ (ಅನು.೩.೩.೧.)

ತಮ್ಮ ಸಿದ್ಧಾಂತವನ್ನು ಸಮರ್ಥನೆ ಮಾಡುವಾಗ ಹೆಜ್ಜೆ ಹೆಜ್ಜೆಗೆ ಈ ಮಾತುಗಳನ್ನು ಹೇಳುತ್ತಾರೆ.

ಹೀಗೆ ಗ್ರಂಥಸಂಶೋಧನೆಗೆ ಚತುಸ್ಸೂತ್ರೀರೂಪವಾದ ಒಂದು ಹೊಸ ಸಂವಿಧಾನವನ್ನು ಆಚಾರ್ಯರು ಅಂದೇ ಬರೆದಿಟ್ಟರು. ಸಂಶೋಧನೆಗೆ ಹೊಸದಾದ ಮೂರ್ತರೂಪವನ್ನು ಕೊಟ್ಟ ಮಹಾನುಭಾವರಿವರು. ಎಂತಹ ಆಧುನಿಕಸಂಶೋಧಕರೂ ಬೆರಗಾಗಿ ಬೆರಳು ಕಚ್ಚುವಂತಹ ಹೊಸ ದಿಗಂತವನ್ನೇ ಸೃಷ್ಟಿಮಾಡಿದ ಏಕೈಕ ಆಚಾರ್ಯರು ಶ್ರೀಮದಾನಂದತೀರ್ಥರು.

**ಶುದ್ಧ ಅರ್ಥದ ನಿರ್ಣಯಕ್ಕೆ ಮಾರ್ಗದರ್ಶನ**

................ಕಿಮ್ವರ್ಥೋ ದೇವದುರ್ಗಮಃ ॥
ಕಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ ।
ಹರಿಣಾ ನಿರ್ಣಯಾನ್ ವಚ್ಮಿ ವಿಜಾನನ್ ತತ್ಪ್ರಸಾದತಃ ॥

ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್ ।
ಯಥಾ ಸ ಭಗವಾನ್ ವ್ಯಾಸಃ ಸಾಕ್ಷಾನ್ನಾರಾಯಣಃ ಪ್ರಭುಃ ॥

ಜಗಾದ ಭಾರತಾದ್ಯೇಷು ತಥಾ ವಕ್ಷ್ಯೇ ತದೀಕ್ಷಯಾ ।
ಸಂಕ್ಷೇಪಾತ್ ಸರ್ವಶಾಸ್ತ್ರಾರ್ಥಂ ಭಾರತಾರ್ಥಾನುಸಾರತಃ ॥
ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂ ಪರಿಕೀರ್ತಿತಮ್ ॥ ಮ.ಭಾ.ತಾ.ನಿ ೨.೫-೯

ವೇದಗಳಲ್ಲಿ ಹೇಳಿದ ತತ್ತ್ವಗಳ ಪರಿಪೂರ್ಣವಾದ ಜ್ಞಾನ ಇತಿಹಾಸಪುರಾಣಗಳ ನೆರವಿನಿಂದಲೇ ಆಗುವದು. ಆದಕ್ಕಾಗಿ ಇತಿಹಾಸಪುರಾಣಗಳ ಅಧ್ಯಯನ ಅನಿವಾರ್ಯ. ಮೇಲೆ ಹೇಳಿದಂತೆ ಇವತ್ತಿಗೆ ಉಪಲಬ್ಧವಾದ, ನಮ್ಮ ಕೈಗೆಟುಕಿದ ಅಲ್ಪಸ್ವಲ್ಪ ವೇದಭಾಗ, ಭಾರತಪುರಾಣಮೊದಲಾದ ಗ್ರಂಥಗಳು ತಿಳಿದವರ ತಿಳಿಯದವರ ತಿಳಿಗೇಡಿತನದಿಂದಾಗಿ ವಿಕೃತವಾದ ಸ್ವರೂಪವನ್ನು ಪಡೆದಿವೆ. ಕಣ್ಣಿಗೆ ಕಾಣದೆ ಉಳಿದ, ನಮ್ಮ ಕೈತಲುಪದ ಗ್ರಂಥಗಳು ನೂರುಕೋಟಿಶ್ಲೋಕಾತ್ಮಕವಾದ ಮೂಲರಾಮಾಯಣ, ಅಷ್ಟೇ ಸಂಖ್ಯೆಯ ಪಂಚರಾತ್ರ, ನೂರುಕೋಟಿಶ್ಲೋಕಾತ್ಮಕವಾದ ಪುರಾಣ, ಅನಂತವಾದ ವೇದಗಳು ಹೀಗೆ ಅನಂತಾನಂತಶಬ್ದರಾಶಿ ಇದೆ. ಹೀಗೆ ಉಪಲಬ್ಧವಿರುವ ಉಪಲಬ್ಧವಿರದ ಸಮಗ್ರಗ್ರಂಥರಾಶಿಯ ಕೋಟ್ಯಂಶವೂ ನಮಗೆ ಉಳಿದಿಲ್ಲ.

ಹೀಗೆ ಗ್ರಂಥಗಳ ಸ್ವರೂಪವೇ ವಿಕೃತವಾದಾಗ ದೇವಾಧಿದೇವತೆಗಳಿಗೂ ಒಗಟಾಗಿಯೇ ಉಳಿದ ಅರ್ಥಗಳ ಬಗೆಗೆ ಹೇಳುವುದೇನು? ಆದಕ್ಕಾಗಿಯೇ 'ಕಾಲದ ಕೈವಾಡದಿಂದಾಗಿ ವಿಕೃತವಾದ ಗ್ರಂಥಗಳ ನಿಜವಾದ ಆಂತರ್ಯವನ್ನು ತೋರಿಸುವದಕ್ಕಾಗಿ ಶ್ರೀಹರಿಯ ಅಣತಿಯಂತೆ ನಾನು ಎಲ್ಲವನ್ನು ನಿರ್ಣಯಿಸುವೆನು. ಅರ್ಥನಿರ್ಣಯಮಾಡುವದಕ್ಕೆ ಬೇಕಾದ ಎಲ್ಲ ಶಾಸ್ತ್ರಗಳ ಅಪಾರವಾದ ಅರಿವನ್ನು ಅವನ ಅನುಗ್ರಹದಿಂದಲೇ ಪಡೆದಿರುವೆ.' ಹೀಗೆ ಆಚಾರ್ಯರು ಹೇಳುವರು.

**ಇತಿಹಾಸ-ಪುರಾಣಗಳು ಹಾಗೂ ಆಚಾರ್ಯರು**

ಭಾರತೀಯವಾಙ್ಮಯಪ್ರಪಂಚದಲ್ಲಿ ಇತಿಹಾಸಪುರಾಣಗಳು ವಿಶಿಷ್ಟವಾದ ಸ್ಥಾನವನ್ನು ಅಲಂಕರಿಸಿವೆ. ಇತಿಹಾಸಪುರಾಣಪ್ರಸ್ಥಾನಗಳಿಗೆ ಶ್ರೀಮದಾಚಾರ್ಯರ ಕೊಡುಗೆ ಅಪಾರ. ಅವುಗಳ ಅಪಾರ್ಥದಿಂದಾಗುವ ಅನರ್ಥವನ್ನು ಪರಿಹರಿಸಿ ಸರಿಯಾದ ಅರ್ಥವನ್ನು ತಿಳಿಸಿ ಮಹದುಪಕಾರ ಮಾಡಿದ ಏಕೈಕ ಆಚಾರ್ಯರು

ಶ್ರೀಮದಾಚಾರ್ಯರು. ಪ್ರಾಚೀನ ಯಾವ ದಾರ್ಶನಿಕಾಚಾರ್ಯರೂ ಇವುಗಳೆಡೆಗೆ ಕಣ್ಣೆತ್ತಿ ನೋಡಲಿಲ್ಲ. ಇಲ್ಲಿರುವ ಸಮಸ್ಯೆಗಳಿಗೆ ತಲೆಕೆಡಿಸಿಕೊಂಡು ಉಪಾಯಗಳನ್ನು ಚಿಂತಿಸುವ ಗೋಜಿಗೂ ಹೋಗಲಿಲ್ಲ. ಶ್ರೀಮನ್ಮಧ್ವಾಚಾರ್ಯರಿಗಿಂತ ಮೊದಲಿನ ಎಲ್ಲ ಆಚಾರ್ಯರು ತಮ್ಮ ಸಿದ್ಧಾಂತವನ್ನು ಸಮರ್ಥಿಸಿಕೊಳ್ಳುವದಕ್ಕಾಗಿ ಇತಿಹಾಸಗಳಾದ ಭಾರತ-ರಾಮಾಯಣಾದಿಗಳಿಂದ ಅನೇಕ ವಾಕ್ಯಗಳನ್ನು ಉದಾಹರಿಸುತ್ತಾರೆ. ಆದರೆ ಆ ವಾಙ್ಮಯಪ್ರಪಂಚಕ್ಕೆ ಅವರ ಕೊಡುಗೆಗಳು ಅತ್ಯಲ್ಪ. ಇಂತಹ ಸನ್ನಿವೇಶದಲ್ಲಿ ಆಚಾರ್ಯರು ಪಾಮರರಿಂದ ಪಂಡಿತರವರೆಗೆ ಮಾಡಿದ ಉಪಕಾರ ಅಪಾರ. ಶ್ರೀಮದಾನಂದತೀರ್ಥಭಗವತ್ಪಾದರು ಮಾತ್ರ ಈ ವಾಙ್ಮಯಗಳಿಗೆ ಉನ್ನತವಾದ ಸ್ಥಾನವನ್ನು ನೀಡಿದ ಮಹಾನುಭಾವರು. ಅವರ ದೃಷ್ಟಿಯಲ್ಲಿ ಇತಿಹಾಸ ಎನ್ನುವ ಶಬ್ದ ವಿಶಿಷ್ಟವಾದ ವಾಙ್ಮಯಪ್ರಪಂಚವನ್ನು ಪ್ರತಿಪಾದನ ಮಾಡುತ್ತದೆ.

ಪಂಚರಾತ್ರಂ ಭಾರತಂ ಚ ಮೂಲರಾಮಾಯಣಂ ತಥಾ ।
ಇತಿಹಾಸ ಇತಿ ಪ್ರೋಕ್ತೋ ........................... ॥

ವೇದಾಶ್ಚೈವೇತಿಹಾಸಾಶ್ಚ ಪುರಾಣಂ ಭಾಗವತಂ ತಥಾ ।
ಮೂಲಪ್ರಮಾಣಮುದ್ದಿಷ್ಟಂ ಮೀಮಾಂಸಾ ಚ ತಥೋತ್ತರಾ ॥ಬೃ.ಭಾ.೩.೫

ಆಚಾರ್ಯರ ದೃಷ್ಟಿಯಲ್ಲಿ ಮಹಾಭಾರತ, ಪಂಚರಾತ್ರ, ಮೂಲರಾಮಾಯಣ ಇಷ್ಟು ವಾಙ್ಮಯವನ್ನು ಇತಿಹಾಸ ಎನ್ನುವ ಶಬ್ದದಿಂದ ತೆಗೆದುಕೊಳ್ಳಬೇಕು. ಇವುಗಳಲ್ಲಿ ಹೇಳಿದ ತತ್ವಗಳು ಅಷ್ಟೇ ಅಧಿಕೃತವಾದದು. ಆಚಾರ್ಯರ ದೃಷ್ಟಿಯಲ್ಲಿ ಈ ಅನಂತವಾದ ಆಗಮದಲ್ಲಿರುವ ಒಂದಕ್ಷರವೂ ವ್ಯರ್ಥವಲ್ಲ. ಪ್ರತಿಯೊಂದು ಅಕ್ಷರವೂ ಭಗವಂತನ ಗುಣರಾಶಿಯನ್ನು ತಿಳಿಸುವದಕ್ಕೆ ಹೊರಟಿದೆ. ಯಾರಿಗೆ ಮಾನಸಿಕವಾದ ಪಕ್ವತೆ ಇದೆಯೋ ಅವರಿಗೆ ಅದರ ಅರಿವು. ಒಟ್ಟಾರೆ ಹೇಳುವದಾದರೆ ಅಗಾಧವಾದ ಈ ಶಬ್ದರಾಶಿಗೆ ವಿಷ್ಣುಪಾರಮ್ಯ ಹೇಳುವದೇ ಉದ್ದೇಶ್ಯ. ಈ ಅರ್ಥದಲ್ಲಿ ಬ್ರಹ್ಮಸೂತ್ರಗಳಿಗೂ ಹಾಗೂ ಅಪೌರುಷೇಯವಾದ ವೇದಗಳಿಗೂ ಇತಿಹಾಸಪುರಾಣಗಳಿಗೂ ಏಕರೂಪತೆಯನ್ನು ತೋರಿಸಿದ ಮೊಟ್ಟಮೊದಲಿನ ಆಚಾರ್ಯರು. ಇತಿಹಾಸ ಪುರಾಣಗಳ ನೆರವಿನಿಂದ ವೇದಾರ್ಥವನ್ನು ಉಪಬೃಂಹಣಮಾಡುವ ಹೊಸದಾದ ಕ್ರಮವನ್ನು ಮೊದಲು ತೋರಿಸಿದವರು. ದಾರ್ಶನಿಕಪ್ರಪಂಚದಲ್ಲಿ ಅವುಗಳಿಗೆ ಸುವ್ಯವಸ್ಥಿತವಾದ ಚೌಕಟ್ಟನ್ನು ಹಾಕಿ ಉತ್ತಮಸ್ಥಾನ ನೀಡಿದರು. ಅಂತೆಯೇ ಆಚಾರ್ಯರು -

ಇತ್ಯೇವ ಶ್ರುತಯೋಽಶೇಷಾಃ ಪಂಚರಾತ್ರಮಥಾಖಿಲಮ್ ।
ಮೂಲರಾಮಾಯಣಂ ಚೈವ ಭಾರತಂ ಸ್ಮೃತಯೋಽಖಿಲಾಃ ॥

ವೈಷ್ಣವಾನಿ ಪುರಾಣಾನಿ ಸಾಂಖ್ಯಯೋಗೌ ಪರಾವಪಿ ।
ಬ್ರಹ್ಮತರ್ಕಶ್ಚ ಮೀಮಾಂಸೇತ್ಯನಂತಃ ಶಬ್ದಸಾಗರಃ ॥

.................. .. ಏತಮೇವಾರ್ಥಮುತ್ತಮಮ್ ।
ಅನ್ಯಾವಕಾಶರಹಿತಂ ಪ್ರಕಾಶಯತಿ ಸಾದರಮ್ ॥ (ಅನು.೩.೩.೧.)

ತಮ್ಮ ಸಿದ್ಧಾಂತವನ್ನು ಸಮರ್ಥನೆ ಮಾಡುವಾಗ ಹೆಜ್ಜೆ ಹೆಜ್ಜೆಗೆ ಈ ಮಾತುಗಳನ್ನು ಹೇಳುತ್ತಾರೆ.

**ತತ್ವದ ಅರಿವಿಗೆ ಆಚಾರ್ಯರು ತೋರಿಸಿದ ಮಾನದಂಡ**

ಸಮುದ್ರದ ನೀರನ್ನು ನೇರವಾಗಿ ಕುಡಿಯಲು ಹೋದ ವ್ಯಕ್ತಿ ಅದು ಕ್ಷಾರವಾಗಿದೆ ಎನ್ನುತ್ತಾನೆ .ಆದರೆ ಅದೇ ನೀರು ಮೇಘಗಳ ಮೂಲಕ ಬಂದಾಗ ಆಹಾ! ಅಮೃತದಂತೆ ಸವಿಯಾಗಿದೆ ಎನ್ನುತ್ತಾನೆ. ಅದೇ ರೀತಿ ವೇದ, ಇತಿಹಾಸಪುರಾಣಗಳು, ಪಂಚರಾತ್ರ ಇತ್ಯಾದಿ ವಾಙ್ಮಯಕ್ಕೆ ಅರ್ಥೈಸುವ ಕ್ರಮವನ್ನು ತಿಳಿದ ಗುರುಪರಂಪರೆ-ಯಿಂದಲೇ ಈ ಶಾಸ್ತ್ರಗಳನ್ನು ಸರಿಯಾಗಿ ತಿಳಿಯಲು ಸಾಧ್ಯ. ಇತಿಹಾಸಪುರಾಣ ಮೊದಲಾದ ಇತಿಹಾಸಕಾವ್ಯಗಳನ್ನು ತಿಳಿಯುವುದಕ್ಕೆ ತನ್ನದೇ ಆದ ಅನೇಕಮಾನದಂಡಗಳಿವೆ. ಅದಕ್ಕನುಗುಣವಾಗಿಯೇ ಇವುಗಳನ್ನು ಅಧ್ಯಯನ ಮಾಡಬೇಕು. ಪ್ರಾಚೀನಪರಂಪರೆಯಿಂದ ಬಂದ ಸುವ್ಯಸ್ಥಿತವಾದ ತರ್ಕಸರಣಿಯನ್ನು ಅಲ್ಲಗಳೆದು ಯಾರೋ, ಯಾವುದೋ ಉದ್ದೇಶಕ್ಕಾಗಿ ಮಾಡಿದ ನಿಯಮಾವಳಿಗಳನ್ನು ಇದರಲ್ಲಿ ಅಳವಡಿಸಿ ಅಧ್ಯಯನಮಾಡುವ ವ್ಯಕ್ತಿಗೆ ಇತಿಹಾಸಪುರಾಣಗಳ ಸರಿಯಾದ ಹಿನ್ನೆಲೆ ಅರ್ಥವಾಗುದಿಲ್ಲ. ಇತಿಹಾಸ- ಪುರಾಣಗಳ ಸರಿಯಾದ ಅರ್ಥನಿರ್ಣಯ ಮಾಡುವದಕ್ಕಾಗಿ ಆಚಾರ್ಯರು ಶ್ರೀಮನ್ಮಹಾಭಾರತ- ತಾತ್ಪರ್ಯನಿರ್ಣಯ, ಶ್ರೀಮದ್ಭಾಗವತತಾತ್ಪರ್ಯನಿರ್ಣಯ ಈ ಗ್ರಂಥಗಳನ್ನು ರಚನೆ ಮಾಡಿದ್ದಾರೆ. ಈ ಎರಡು ಗ್ರಂಥಗಳಲ್ಲಿ ಮೂಲಗ್ರಂಥಗಳ ಸರಿಯಾದ ಅರ್ಥವನ್ನು ತಿಳಿಯುವದಕ್ಕೆ ಮೂಲಭೂತವಾದ ಮಾನದಂಡಗಳನ್ನು ನಮಗೆ ತಿಳಿಸುತ್ತಾರೆ.

**ತಸ್ಮಾತ್ ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ'** ಮ.ಭಾ.ತಾ.೧.೪೪.

ಋಗಾದಿನಾಲ್ಕುವೇದಗಳು, ಮಹಾಭಾರತ, ಮೂಲರಾಮಾಯಣ, ಪಂಚರಾತ್ರ, ಪುರಾಣಗಳು ಈ ಎಲ್ಲ ಗ್ರಂಥಗಳು ನಿರ್ಣೇಯಶಾಸ್ತ್ರಗಳು. ಕರ್ಮಮೀಮಾಂಸಾ, ದೈವೀಮೀಮಾಂಸಾ, ಬ್ರಹ್ಮಮೀಮಾಂಸಾ ಈ ಮೂರು ನಿರ್ಣಾಯಕವಾದ ಮೀಮಾಂಸಾಶಾಸ್ತ್ರಗಳು.

ಸಕಲ ನಿರ್ಣೇಯ ಹಾಗೂ ನಿರ್ಣಾಯಕಶಾಸ್ತ್ರಗಳಲ್ಲಿ ಬ್ರಹ್ಮಮೀಮಾಂಸಾ ಎಂದು ಕರೆಸಿಕೊಳ್ಳುವ ಬ್ರಹ್ಮಸೂತ್ರಗಳು ಅತ್ಯುತ್ತಮವಾಗಿವೆ. ಸಕಲಶಾಸ್ತ್ರಾರ್ಥನಿರ್ಣಯಕ್ಕಾಗಿಯೇ ವೇದವ್ಯಾಸದೇವರು ಬ್ರಹ್ಮಸೂತ್ರಗಳನ್ನು ರಚಿಸಿದ್ದಾರೆ. ಆ ಸೂತ್ರಗಳಲ್ಲಿ ನಿರ್ಣಯವಾದ ವಿಷಯಗಳ ಹಿನ್ನೆಲೆಯಲ್ಲಿಯೇ ಸಮಗ್ರ ವೇದಗಳನ್ನು ಹಾಗೂ ಇತಿಹಾಸಪುರಾಣಗಳನ್ನು ಅರ್ಥೈಸಬೇಕು.

**'ನಾನರ್ಥಕಃ ಸ್ವರೋ ವಾಪಿ ವೇದೇ ವಾ ವೈದಿಕೇಽಪಿ ವಾ'**

ಕೆಲ ವೈದಿಕಾಚಾರ್ಯರು ವೇದಗಳ ಹಲವು ಭಾಗಗಳು ಅಪ್ರಮಾಣ ಎಂದು ಘೋಷಿಸಿದರು. ಇನ್ನು ಕೆಲವರು ವೇದಾಂತ ಎಂದು ಕರೆಸಿಕೊಳ್ಳುವ ಉಪನಿಷತ್ತುಗಳು ವೇದಗಳ ಬರಡುಭೂಮಿ ಎಂದು ಕರೆದರು. ಆಚಾರ್ಯರು ಮಾತ್ರ ವೇದಗಳು 'ಪರಮಪ್ರಮಾಣ' ಅಷ್ಟೇ ಅಲ್ಲ ವೇದದಲ್ಲಿಯ ಒಂದಕ್ಷರವೂ ವ್ಯರ್ಥವಲ್ಲ ಇಷ್ಟುಮಾತ್ರವಲ್ಲ ಸಮಗ್ರವಾದ ವೇದವಾಙ್ಮಯಕ್ಕೆ ಮೂರು ಅರ್ಥಗಳು ಇವೆಯೆಂದು ಹೇಳಿ, ಆ ಮೂರು ಅರ್ಥಗಳನ್ನು ತಿಳಿಸಿದ ಮಹಾನುಭಾವರು ಆಚಾರ್ಯರು. ವೇದಗಳಿಗೆ ಈ ರೀತಿ ಅರ್ಥೈಸುವ ಕ್ರಮವನ್ನು ಕಾಪಾಲಿಶಾಸ್ತ್ರಿಮೊದಲಾದ ಅನೇಕ ಆಧುನಿಕವಿದ್ವಾಂಸರೂ ಹೊಗಳಿದ್ದುಂಟು.

**'ಏವಮಪಿ ನ ಕೋಽಪ್ಯಾಸೀತ್ ವೇದಾನಾಮಧ್ಯಾತ್ಮಪರತ್ವಪಕ್ಷಸ್ಯೋಜ್ಜೀವನಾಯ ಪ್ರವೃತ್ತ ಇತಿ ನ ಶಕ್ಯಂ ವದಿತುಂ ಆಚಾರ್ಯಮಧ್ವಗ್ರಂಥೇಷು ಜಾಗ್ರತ್ಸು, ಯತ್ ಸಾಯಣಾತ್ ಕಿಂಚಿತ್ ಪೂರ್ವಂ ಆನಂದತೀರ್ಥಾಚಾರ್ಯಃ**

**ಋಙ್ಮಂತ್ರತಾತ್ಪರ್ಯಪರಿಗ್ರಹಸ್ಯ ಪ್ರಕಾರೋಪಪ್ರದರ್ಶನಾಯ ಋಕ್ಸಂಹಿತಾಯಾಃ ಪ್ರಥಮಮಂಡಲೀಯಾನಿ ಚತ್ವಾರಿಂಶತ್ಸೂಕ್ತಾನಿ ವ್ಯಾಚಖ್ಯೌ ।'** ಋ.ಭಾ.ಭೂಮಿಕಾ ಖಂ.೩.೩೪ಪೇಜ್ ಎಂದು.

ಶ್ರೀಮದಾಚಾರ್ಯರು ಋಗ್ವೇದದ ನಲವತ್ತು ಸೂಕ್ತಗಳಿಗೆ ಅಧ್ಯಾತ್ಮಾದಿ ಮೂರುಬಗೆಯ ಅರ್ಥದ ವಿವರಣೆಯನ್ನು ನೀಡುವ ನೇರವಾದ ಒಂದು ವ್ಯಾಖ್ಯಾನವನ್ನು ಬರೆದರು. ಅವರು ಬರೆದ ಇನ್ನುಳಿದ ಗ್ರಂಥಗಳಲ್ಲಿ ಅರ್ಧಭಾಗ ವೇದಾರ್ಥನಿರ್ಣಯಕವಾದ ಬ್ರಹ್ಮಸೂತ್ರಾದಿಗಳಿಗೆ ವ್ಯಾಖ್ಯಾನರೂಪವಾಗಿವೆ. ಈ ರೀತಿ ಆಚಾರ್ಯರು ಬರೆದ ಸರ್ವಮೂಲಗ್ರಂಥಗಳಲ್ಲಿ ಬಹುಭಾಗ ವೇದಾರ್ಥನಿರ್ಣಯಕ್ಕಾಗಿ ಇವೆ.

ಇದನ್ನು ಅರಿಯದ 'ವಿರೂಪಾಕ್ಷರಾದ' ಅನೇಕ ಆಧುನಿಕವಿಮರ್ಶಕರು ಆಚಾರ್ಯರ ಸಿದ್ಧಾಂತ ಕೇವಲ ಪುರಾಣಕಲ್ಪಿತವಾದದ್ದು ಎಂದು ಕಿಡಿಗೇಡಿತನದ ಮಾತನ್ನು ಆಡುವರು. 'ಸಂ'ಶೋಧನಪ್ರಜ್ಞೆ ಇಲ್ಲದ ಈ ಜನರಿಗೆ, ಆಚಾರ್ಯರ ಪ್ರತಿಯೊಂದು ನುಡಿಯು 'ಸಹಸ್ರಾಕ್ಷ'ರಾದವರಿಗೆ ಮಾತ್ರ ತಿಳಿಯಲು ಸಾಧ್ಯ ಎಂದು ಶತಮಾನ ಶತಮಾನ ಕಳೆದರೂ ತಿಳಿಯಲು ಸಾಧ್ಯವಿಲ್ಲ.

**ದಶಾರ್ಥಾಃ ಸರ್ವಭಾರತೇ**

ಇದಲ್ಲದೆ ಭಾರತದ ನಿಜವಾದ ಅರ್ಥವನ್ನು ಆವಿಷ್ಕರಿಸಿದವರೇ ಶ್ರೀಮದಾಚಾರ್ಯರು. ವೇದಗಳಿಗೆ ಮೂರು ಅರ್ಥಗಳು, ಮಹಾಭಾರತಕ್ಕೆ ಅತಿಕಡಿಮೆಯೆಂದರೂ ಹತ್ತು ಅರ್ಥಗಳು. ಭಾರತದಲ್ಲಿಯೇ ಬರುವ ವಿಷ್ಣುಸಹಸ್ರನಾಮಕ್ಕೆ ನೂರು ಅರ್ಥಗಳು. ಈ ತತ್ವವನ್ನು ಆಚಾರ್ಯರು ಸ್ಕಂದ-ನಾರದೀಯಪುರಾಣವಚನಗಳನ್ನು ಉಲ್ಲೇಖಿಸಿ ಸಮರ್ಥಿಸುತ್ತಾರೆ-

ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ ।
ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್ ॥' ಇತಿ ಸ್ಕಾಂದೇ । ಋಗ್ಭಾಷ್ಯಮ್

ಭಾರತಂ ಚಾಪಿ ಕೃತವಾನ್ ಪಂಚಮಂ ವೇದಮುತ್ತಮಮ್ ।
ದಶಾವರಾರ್ಥಂ ಸರ್ವತ್ರ ಕೇವಲಂ ವಿಷ್ಣುಬೋಧಕಮ್ ॥
ಪರೋಕ್ಷಾರ್ಥಂ ತು ಸರ್ವತ್ರ ವೇದಾದಪ್ಯುತ್ತಮಂ ತು ಯತ್ ॥' ಇತಿ ಸ್ಕಾಂದೇ । ಗೀ.ಭಾ.

ಈ ಪ್ರಮೇಯವನ್ನು ಹರಿವಂಶ ಹಾಗೂ ಮಾರ್ಕಂಡೇಯಪುರಾಣದಲ್ಲಿ ಇವತ್ತಿಗೂ ಸ್ಫುಟವಾಗಿ ಕಾಣಬಹುದು. **'ಮಹಾಭಾರತಮಾಖ್ಯಾನಂ ಬಹ್ವರ್ಥಂ ಶ್ರುತಿವಿಸ್ತರಮ್'** ೧.೧.೧೨.**'ತದಿದಂ ಭಾರತಾಖ್ಯಾನಂ ಬಹ್ವರ್ಥಂ ಶ್ರುತಿವಿಸ್ತರಮ್'** ೧.೧೯.

ಮಹಾಭಾರತದಲ್ಲಿ ಬಂದಿರುವ ಮಾತಿನಿಂದಲೇ ಮಹಾಭಾರತಕ್ಕೆ ಅನೇಕಾರ್ಥಗಳಿವೆ ಎಂದು ಹೇಳುತ್ತಾರೆ.

ಭಾರತಾರ್ಥಸ್ತ್ರಿಧಾ ಪ್ರೋಕ್ತಃ ಸ್ವಯಂ ಭಗವತೈವ ಹಿ ।
ಮನ್ವಾದಿ ಕೇಚಿದ್ ಬ್ರುವತೇ ಹ್ಯಾಸ್ತೀಕಾದಿ ತಥಾಪರೇ ॥

ತಥೋಪರಿಚರಾದ್ಯನ್ಯೇ ಭಾರತಂ ಪರಿಚಕ್ಷತೇ । ....
ಏವಮಧ್ಯಾತ್ಮನಿಷ್ಠಂ ಹಿ ಭಾರತಂ ಪರಿಚಕ್ಷತೇ ॥ ೨.೧೩೬ ।

೧. **ಮನ್ವಾದಿ -** ಇದು ಅನಂತಜೀವರಾಶಿಗಳ ಮನಸ್ಸೆಂಬ ರಣಾಂಗಣದಲ್ಲಿ ಆಗುವ ಗುಣ-ದೋಷಗಳ, ಧರ್ಮ-ಅಧರ್ಮಗಳ, ತತ್ವಜ್ಞಾನ-ಮಿಥ್ಯಾಜ್ಞಾನಗಳ, ಪುಣ್ಯ-ಪಾಪಗಳ ಸಂಘರ್ಷದ ರೋಚಕ ಕಥೆಯೂ ಕೂಡ.

**ಯುಧಿಷ್ಠಿರ** - ಧರ್ಮ.
**ಭೀಮ** - ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ, ಬಲ.
**ಅರ್ಜುನ** - ಶ್ರವಣ, ಮನನ, ನಿಧಿಧ್ಯಾಸನ.
**ನಕುಲ** - ಶೀಲ.
**ಸಹದೇವ** - ವಿನಯ.
**ದ್ರೌಪದೀ** - ಸರ್ವವಿದ್ಯಾ.

ಹೀಗೆ ಪಂಚಪಾಂಡವರು ಹಾಗೂ ದ್ರೌಪದಿ ಹದಿನೇಳು ಗುಣಗಳಿಗೆ ಪ್ರತೀಕರಾದರೆ,

**ದುರ್ಯೋಧನ -** ಅಜ್ಞಾನಾದಿಸ್ವರೂಪ.
**ದುಃಶಾಸನ** - ವಿಪರೀತಜ್ಞಾನ
**ಶಕುನಿ** - ನಾಸ್ತಿಕ್ಯ.
**ಇತರಕೌರವರು-** ಸರ್ವದೋಷ ಸ್ವರೂಪರು
**ಕಂಸ** - ಕಾಮ

ಹೀಗೆ ದುರ್ಯೋಧನಾದಿಗಳು ಮಿಥ್ಯಾಜ್ಞಾನ, ನಾಸ್ತಿಕ್ಯ, ಕಾಮಕ್ರೋಧಾದಿಗಳಿಗೆ ಪ್ರತೀಕರಾಗಿದ್ದಾರೆ.

**ಅಶ್ವತ್ಥಾಮಾಚಾರ್ಯ -** ಅಹಂಕಾರ
**ಭೀಷ್ಮಾದಿಗಳು** - ಇಂದ್ರಿಯಗಳು
**ಪಾಂಡವರ ಸೈನಿಕರು -** ಪುಣ್ಯಾಭಿಮಾನಿಗಳು
**ಕೌರವರ ಸೈನಿಕರು** - ಪಾಪಾಭಿಮಾನಿಗಳು

ಹೀಗೆ ಈ ಆಧ್ಯಾತ್ಮಿಕ ಯುದ್ಧದಲ್ಲಿ ಕೊನೆಯದಾಗಿ ಎಲ್ಲ ಗುಣಗಳಿಗೆ ಪ್ರತೀಕರಾದ, ಆಸ್ತಿಕರಾದ ಪಾಂಡವರ ಜಯವನ್ನು ಸಾರುವ ಮೂಲಕ ಅಸತ್ಯದ ಮೇಲೆ ಸತ್ಯದ, ಪಾಪದಮೇಲೆ ಪುಣ್ಯದ, ಮಿಥ್ಯಾಜ್ಞಾನದಮೇಲೆ ತತ್ವಜ್ಞಾನದ ಜಯವನ್ನು ತಿಳಿಸುವ ಕಥೆ. ಸಾಧಕನಾದ ಪ್ರತಿಯೊಬ್ಬ ಜೀವನು ತನ್ನ ಮಟ್ಟದಲ್ಲಿ ಈ ಎಲ್ಲ ಗುಣಗಳನ್ನು ಸಂಪಾದಿಸಿ, ದೋಷಗಳನ್ನು ಕಳೆದುಕೊಂಡು ಉಪರಿಚರನಾದ ಭಗವಂತನನ್ನು ಪಡೆಯಬೇಕು ಎಂದು ಸಂದೇಶನೀಡುವ ಸುಂದರವಾದ ಅರ್ಥ.

೨. **ಆಸ್ತೀಕಾದಿ -** ಇದು ಆಸ್ತಿಕರಾದ ಪಾಂಡವರ ನಾಸ್ತಿಕರಾದ ಕೌರವರ ಯುದ್ಧವೂ ಹೌದು.

**3. ಉಪರಿಚರಾದಿ -** ಮಹಾಭಾರತದ ಪ್ರತಿಯೊಂದು ವಾಕ್ಯ, ಪದ, ಅಕ್ಷರಗಳು ಎಲ್ಲವನ್ನೂ ಮೀರಿನಿಂತ, ಎಲ್ಲರಿಗಿಂತಲೂ ಮಿಗಿಲಾಗಿ ಇರುವ 'ಉಪರಿಚರ'ನಾದ ಭಗವಂತನ ಗುಣಗಾನರೂಪವಾಗಿದೆ. ಇದು ಔಪರಿಚರಾರ್ಥ.

**'ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥'** ಎಂಬ ಮಹಾಭಾರತದ ವಚನವೇ ಈ ಅರ್ಥವನ್ನು ತಿಳಿಸುತ್ತದೆ.

ಇಲ್ಲಿ ಎರಡನೆಯ ಅರ್ಥ ಎಲ್ಲರ ಕಣ್ಣಿಗೆ ಕಂಡ ಪಾಂಡವರ ಕಥೆ. ಉಳಿದೆರಡು ಅರ್ಥಗಳು 'ಪರೋಕ್ಷ'ವಾದ, ಕಣ್ಣಿಗೆ ಕಾಣದ, ಎಲ್ಲರಿಗೆ ತಿಳಿಯದ ಆಧ್ಯಾತ್ಮಿಕವಾದ ಅರ್ಥ.

ಇದಲ್ಲದೇ ಮಹಾಭಾರತಕ್ಕೆ ಇನ್ನೂ ಅನೇಕಾರ್ಥಗಳುಂಟು ಎಂದು ಆಚಾರ್ಯರು ಹೇಳುವರು. ಆ ಅರ್ಥಗಳನ್ನು ಉಚ್ಚಮಟ್ಟದ ಅಂತಃಪ್ರಜ್ಞೆಯಿರದ ಜನ ಅರಿಯಲಾರರು ಎನ್ನುವದಕ್ಕೆ ಹೇಳದೆ ಕೈಬಿಟ್ಟಿದ್ದಾರೆ. ಹೀಗೆ ಭಾರತಕ್ಕೆ ಇರುವ ಅಪರೂಪದ ಅನೇಕಾರ್ಥವನ್ನು ಆವಿಷ್ಕರಿಸಿದವರೇ ಆಚಾರ್ಯರು. ಜೊತೆಗೆ ಗೊಂದಲದ ಗೂಡಾದ ಈ ಶ್ಲೋಕದ ನಿಜವಾದ ಹಾರ್ದವನ್ನು ತೆಗೆದಿಟ್ಟ ಹಿರಿಮೆಯೂ ಮಧ್ವಾಚಾರ್ಯರಿಗೆ ಮಾತ್ರ.

ಮಹಾಭಾರತದ ಅರ್ಥವೈವಿಧ್ಯವನ್ನು ಹೇಳಲು ಹೊರಟ ಈ ಶ್ಲೋಕಕ್ಕೆ ಅನೇಕಜನ ಅಸಂಗತವಾದ ಅರ್ಥವನ್ನು ಹೇಳುತ್ತಾರೆ.

**'ವರ್ಣಾನುಪೂರ್ವೀಭೇದೇಽಪಿ ಪ್ರತಿಕಲ್ಪಮರ್ಥಾನಾಂ ಸಮಾನನಾಮರೂಪಕ್ರಮತ್ವಾತ್ ಭಾರತಾರಂಭೇ ಮತಭೇದಮಾಹ- ಮನ್ವಾದೀತಿ ॥ ಮನುರ್ಮಂತ್ರೋ 'ನಾರಾಯಣಂ ನಮಸ್ಕೃತ್ಯ' ಇತಿ 'ಓಂ ನಮೋ ಭಗವತೇ ವಾಸುದೇವಾಯ' ಇತಿ ವಾ ತದಾದಿ ಇತಿ ಪ್ರಾಂಚಃ । ದಿವಃ ಪುತ್ರೋ ವೈವಸ್ವತಮಹ್ಯಸಂಜ್ಞೋ ಮನುಃ ತದಾದೀತಿ ತತ್ತ್ವಮ್ । ಆಸ್ತೀಕಂ ಆಸ್ತೀಕಚರಿತಂ ತದಾದಿ, ಉಪರಿಚರೋ ವಸುಃ ತಚ್ಚರಿತಾದಿ ವಾ ।'** ಆದಿ. ೧-೫೨ (ನೀಲಕಂಠ)

'ಬ್ರಹ್ಮದೇವರ ಪ್ರತಿ ದಿನಕಲ್ಪದಲ್ಲಿ ಭಗವಂತನ ಹತ್ತು ಅವತಾರಗಳು ಉಂಟು. ಹೀಗಾಗಿ ಪ್ರತಿ ದಿನಕಲ್ಪದಲ್ಲಿಯೂ ಕೃಷ್ಣಾವತಾರವೂ ಇದೆ ಮಹಾಭಾರತವೂ ಇದೆ. ಆ ದಿನಕಲ್ಪದಲ್ಲಿ ಮಹಾಭಾರತದ ಪ್ರಧಾನಕಥೆಯಲ್ಲಿ ಯಾವ ವ್ಯತ್ಯಾಸವಾಗದಿದ್ದರೂ ಕಥೆ ಹೆಣೆಯುವ ಮಹಾಭಾರತದ ಶಬ್ದದ ಆನುಪೂರ್ವೀಯಲ್ಲಿ ವ್ಯಾತ್ಯಾಸವಾಗಬಹುದು. ಹೀಗಾಗಿ ವಿಭಿನ್ನ ಕಲ್ಪಗಳಲ್ಲಿ ಭಾರತಕಥಾರಂಭದಲ್ಲಿ ಕಂಡುಬರುವ ವ್ಯತ್ಯಾಸವನ್ನು ಈ ಶ್ಲೋಕ ಹೇಳಲು ಹೊರಟಿದೆ. ಮನು ಎಂದರೆ ಮಂತ್ರಗಳು ಎಂದು ಅರ್ಥ. ಒಂದು ಕಲ್ಪದಲ್ಲಿ 'ನಾರಾಯಣಂ ನಮಸ್ಕೃತ್ಯ' 'ಓಂ ನಮೋ ಭಗವತೇ ವಾಸುದೇವಾಯ' ಎನ್ನುವ ಮಂತ್ರದಿಂದ ಮಹಾಭಾರತ ಆರಂಭವಾಗುತ್ತದೆ. ಮತ್ತೊಂದು ಕಲ್ಪದಲ್ಲಿ 'ಆಸ್ತೀಕ' ಎಂದರೆ ಆಸ್ತೀಕನ ಕಥೆಯಿಂದ ಮಹಾಭಾರತದ ಆರಂಭ. ಇನ್ನೊಂದು ಕಲ್ಪದಲ್ಲಿ 'ಔಪರಿಚರ' ಎಂದರೆ ಉಪರಿಚರವಸುವಿನ ಕಥೆ ಮೊದಲುಮಾಡಿಕೊಂಡು ಮಹಾಭಾರತ ಆರಂಭವಾಗುತ್ತದೆ' ಎಂದು ಈ ಶ್ಲೋಕ ಹೇಳಲು ಹೊರಟಿದೆ. ಇದು ನೀಲಕಂಠರ ಅಭಿಪ್ರಾಯ.

ನೀಲಕಂಠರು ಮೇಲೆ ಹೇಳಿದ ಅಂಶದಲ್ಲಿ ಸತ್ಯಾಂಶವಿಲ್ಲದಿಲ್ಲ. ಪ್ರತಿಕಲ್ಪದಲ್ಲಿ ಶಬ್ದದ ಆನುಪೂರ್ವೀಯಲ್ಲಿ ವ್ಯತ್ಯಾಸವಾಗುವದು ವಾಸ್ತವ. ಆದರೆ ಆ ವಿಷಯವನ್ನೇ 'ಮನ್ವಾದಿ ಕೇಚಿದ್ ಬ್ರುವತೇ' ಎನ್ನುವ ಶ್ಲೋಕದಲ್ಲಿ ಹೇಳಲು ಹೊರಟಿದ್ದಾರೆ ಎಂದು ಹೇಳಲು ಯಾವ ಆಧಾರವನ್ನು ಅವರು ಒದಗಿಸಲಿಲ್ಲ. ಆಚಾರ್ಯರು ಮಾತ್ರ **'ಭಾರತಾರ್ಥಸ್ತ್ರಿಧಾ ಪ್ರೋಕ್ತಃ ಸ್ವಯಂ ಭಗವತೈವ ಹಿ' 'ಇತ್ಯಾದಿ ವ್ಯಾಸವಾಕ್ಯೈಸ್ತು ವಿಷ್ಣೂತ್ಕರ್ಷೋಽವಗಮ್ಯತೇ'** ಎಂಬುದಾಗಿ ಇತರ ಪುರಾಣಗಳಲ್ಲಿ ಬಂದ ವ್ಯಾಸವಚನಗಳಿಂದಲೇ **'ಮನ್ವಾದಿ ಕೇಚಿತ್ ಬ್ರುವತೇ'** ಎನ್ನುವ ಶ್ಲೋಕದ ವ್ಯಾಖ್ಯಾನಮಾಡುತ್ತಾರೆ. ಹೀಗಾಗಿ ಆಚಾರ್ಯರು ಹೇಳುವ ಅರ್ಥ ಗ್ರಂಥಕರ್ತೃಗಳಾದ ವ್ಯಾಸರಿಗೆ ಅತ್ಯಂತ ಸಮ್ಮತವಾದ ಅರ್ಥ.

**ಭಾಷಾತ್ರಯಗಳ ಬಳಕೆ -**

ಅಪೌರುಷೇಯವಾದ ವೇದಗಳು ಸಮಾಧಿ, ದರ್ಶನ, ಗುಹ್ಯ ಎಂಬ ಮೂರು ಭಾಷೆಗಳನ್ನು ಬಳಸಿಯೇ ತತ್ವವನ್ನು ತಿಳಿಸುತ್ತವೆ. ಅದರಂತೆ ವೇದವ್ಯಾಸದೇವರು ಮೂರುಭಾಷೆಗಳನ್ನು ಅಳವಡಿಸಿಕೊಂಡೇ ಭಾರತ ಹಾಗೂ ಪುರಾಣಗಳನ್ನು ರಚನೆ ಮಾಡಿದರು. ಇದಲ್ಲದೆ ಕಥಾನಿರೂಪಣದಲ್ಲಿ ಬಳಕೆಯಾಗುವ ೧. ವ್ಯತ್ಯಾಸ, ೨.ಪ್ರಾತಿಲೋಮ್ಯ, ೩.ಗೋಮೂತ್ರೀ, ೪.ಪ್ರಘಸ, ೫.ಉಕ್ಷಣ, ೬.ಸುಧುರ, ೭.ಸಾಧು ಎಂಬ ಏಳುವಿಧವಾದ ಪ್ರಭೇದಗಳನ್ನು, ಗೌಡೀ, ವೈದರ್ಭೀ, ಪಾಂಚಾಲೀ ಮೊದಲಾದ ನೂರು ರೀತಿಗಳನ್ನು ಬಳಸಿ ಮಹಾಭಾರತಾದಿಗಳನ್ನು ರಚನೆ ಮಾಡಿದರು. ಪುರಾಣಗಳಲ್ಲಿ ಅಲ್ಲಲ್ಲಿ ಕಂಡು ಬರುವ ಈ ತತ್ವವನ್ನು ಮೊದಲು ಆವಿಷ್ಕರಿಸಿದವರೇ ಶ್ರೀಮದಾಚಾರ್ಯರು. ಮಹತ್ವದ ಈ ತತ್ವವನ್ನು ಆಚಾರ್ಯರು ನಮಗೆ ತಿಳಿಹೇಳದಿದ್ದರೆ ಭಾರತ-ಪುರಾಣಸಾಗರಗಳ ದಡಮುಟ್ಟುವದೇ ಅಸಾಧ್ಯದ ಮಾತಾಗಿತ್ತು. ಈ ತತ್ವ ತಿಳಿಯದವರಿಗೆ ಎಲ್ಲವೂ ಗೊಂದಲಮಯ. ಇವರಿಗೆ ಭಾರತಪುರಾಣಗಳ ಅರಿವು ಅಪರಿಪೂರ್ಣ ಅಷ್ಟೇ ಅಲ್ಲ ಅಯಥಾರ್ಥವೂ ಕೂಡ.

ಆಚಾರ್ಯರು ತೋರಿಸಿದ ತತ್ವವನ್ನು ಬದಿಗೊತ್ತಿ ಪುರಾಣಗಳಲ್ಲಿ ತೋರುವ ಕಗ್ಗಂಟನ್ನು ಬಿಡಿಸಲು ಹೊರಟರೆ ಅದು ಕಗ್ಗಂಟಾಗಿಯೇ ಉಳಿಯುತ್ತದೆ ಎನ್ನುವುದಕ್ಕೆ ಒಂದು ದೃಷ್ಟಾಂತವನ್ನು ನೋಡೋಣ.

ಕುಂಭಕರ್ಣವಧ ಪ್ರಸಂಗ. ಭಾರತದಲ್ಲಿ 'ಕುಂಭಕರ್ಣನನ್ನು ಲಕ್ಷ್ಮಣ ಕೊಂದ' ಎಂದು ಹೇಳಿದೆ. 'ಶ್ರೀರಾಮನು ಕೊಂದ' ಎಂದು ರಾಮಾಯಣದಲ್ಲಿ ಹೇಳಿದೆ.

ಆ ಪ್ರಸಂಗದಲ್ಲಿ ರಾಮಾಯಣದ 'ತಿಲಕ' ವ್ಯಾಖ್ಯಾನಕಾರರು ವಿರೋಧ ಪರಿಹರಿಸುವ ಕ್ರಮ ಹೀಗಿದೆ. 'ಮಹಾಭಾರತದಲ್ಲಿ ಕುಂಭಕರ್ಣನನ್ನು ಕೊಂದದ್ದು ಲಕ್ಷ್ಮಣ ಎಂದು ಹೇಳಿದ್ದಾರೆ. ರಾಮಾಯಣದಲ್ಲಿ ಶ್ರೀರಾಮದೇವರು ಕೊಂದರು ಎಂಬುದಾಗಿ ಹೇಳುತ್ತಿದ್ದಾರೆ. ಆದರೂ ವಿರೋಧವಿಲ್ಲ. ರಾಮ ಹಾಗೂ ಲಕ್ಷ್ಮಣ ಇಬ್ಬರೂ ಸೇರಿ ಕುಂಭಕರ್ಣನನ್ನು ಕೊಂದಿದ್ದಾರೆ. ರಾಮ ಕೊಂದ ವಿಷಯವನ್ನು ರಾಮಾಯಣ ಹೇಳಿದರೆ, ಲಕ್ಷ್ಮಣ ಕೊಂದದ್ದನ್ನು ಮಹಾಭಾರತ ಹೇಳುತ್ತಿದೆ ಆದ್ದರಿಂದ ರಾಮಾಯಣಕ್ಕೂ ಮಹಾಭಾರತಕ್ಕೂ ವಿರೋಧಶಂಕೆ ಸರಿಯಲ್ಲ.' ಎಂದು.

ಮೊದಲನೆಯದಾಗಿ 'ರಾಮಲಕ್ಷ್ಮಣರಿಬ್ಬರೂ ಕುಂಭಕರ್ಣನನ್ನು ಕೊಂದರು' ಎನ್ನುವ ಮಾತಿಗೆ ಯಾವ ಆಧಾರವನ್ನೂ ಅವರು ಒದಗಿಸಿಲ್ಲ.

ಅಲ್ಲದೇ ಪದ್ಮಪುರಾಣದ ವಚನವನ್ನು ಗಮನಿಸಿದಾಗ ಅವರ ವ್ಯಾಖ್ಯಾನ ಸಮಂಜಸವಲ್ಲ ಎಂದು ಸ್ಪಷ್ಟವಾಗುತ್ತದೆ.

ಪದ್ಮಪುರಾಣದ ಉತ್ತರಖಂಡದಲ್ಲಿ ಜಯ-ವಿಜಯರಿಗೆ ಸನಕಾದಿಗಳು ಶಾಪನೀಡಿದಾಗ ಜಯವಿಜಯರು ಭಗವಂತನನ್ನು ಪ್ರಾರ್ಥನೆ ಮಾಡುತ್ತಾರೆ -

**'ದೇವ ತ್ವಯ್ಯೈವ ನಿಹತೌ ಪ್ರಾಪ್ಸ್ಯಾವೋ ಭವದಂತಿಕಮ್'** ಪದ್ಮಪುರಾಣ ಉ.ಖಂ. ೨೩೭-೧೦

'ಭಗವಂತನೇ ನಿನ್ನಿಂದಲೇ ನಾವು ಹತರಾಗಬೇಕು' ಎಂಬ ವರವನ್ನು ಪ್ರಾರ್ಥಿಸುತ್ತಾರೆ.

ಭಗವಂತ ಜಯವಿಜಯರಿಗೆ 'ನೀವು ಭೂಮಿಯಲ್ಲಿ ರಾಕ್ಷಸರಾಗಿ ಹುಟ್ಟಿದಾಗ **ನಾನೇ ನಿಮ್ಮಿಬ್ಬರನ್ನು ಸಂಹಾರ ಮಾಡುವೆ'** ಎಂದು ವರ ಕೊಟ್ಟಿದ್ದಾನೆ. ಆದನ್ನೇ ಶ್ರೀಮದಾಚಾರ್ಯರು - **'ಮಯ್ಯೈವ ವಧ್ಯೌ ಭವತಂ ತ್ರಿಜನ್ಮಸು'** ಎಂದು ಹೇಳಿದ್ದಾರೆ. ಹಾಗಾಗಿ ರಾವಣ ಹಾಗೂ ಕುಂಭಕರ್ಣನನ್ನು ಕೊಲ್ಲಬೇಕಾದವನು ರಾಮನೇ ಹೊರತು ಲಕ್ಷ್ಮಣನಲ್ಲ. ಹೀಗೆ ಮೇಲ್ನೋಟದಿಂದಲೇ ತಿಲಕವ್ಯಾಖ್ಯಾನದ ವಿವರಣೆ ಅಸಂಗತ ಎಂದು ತೋರುತ್ತದೆ. ತಿಲಕವ್ಯಾಖ್ಯಾನಕಾರರು ರಾಮಾಯಣಭಾರತಗಳಲ್ಲಿ ಬರುವ ವಿರೋಧ ಪರಿಹಾರ ಮಾಡಲು ಹೋಗಿ ಪದ್ಮಪುರಾಣದ ವಿರೋಧ ಕಟ್ಟಿಕೊಂಡಂತಾಯಿತು. ಇದೊಂದು 'ವೃಶ್ಚಿಕಭಿಯಾ ಪಲಾಯಮಾನಃ ಆಶೀವಿಷಮುಖೇ ನಿಪತತಿ' ಆಯಿತು. ಸ್ವಬುದ್ಧಿವೈಭವದಿಂದ ಮಾಡಿದ ವಿರೋಧಪರಿಹಾರ ಪರಿಹಾರಾಭಾಸವೆ ಹೊರತು ನಿಜವಾದ ಪರಿಹಾರವಲ್ಲ.

ಆಚಾರ್ಯರು ಮಾತ್ರ ಈ ಗೊಂದಲವನ್ನು ಇನ್ಯಾವ ಗೊಂದಲಕ್ಕೂ ಆಸ್ಪದಕೊಡದಂತೆ ಪರಿಹರಿಸಿದವರು. ಪರಸ್ಪರ ಅಸಂಗತವಾಗಿ ತೋರುವ ಇಂತಹ ಸಾವಿರಾರು ಮಾತುಗಳನ್ನು ಹೊಂದಿಸುವದಕ್ಕಾಗಿಯೇ ಭಾಷಾತ್ರಯಗಳ, ವ್ಯತ್ಯಾಸಾದಿಸಪ್ತಭೇದಗಳ ಬಳಕೆಯಾದುದ್ದನ್ನು ಆಚಾರ್ಯರು ತಿಳಿಸಿದರು. ಅವುಗಳಿಗೆಲ್ಲ ಆಧಾರ ಪುರಾಣಗಳಲ್ಲಿ ಬಂದ ಮಾತುಗಳೇ.'**ವ್ಯತ್ಯಾಸೇನಾಪಿ ಚೋಚ್ಯಂತೇ ಅವಿವೇಕೇನ ಕುತ್ರಚಿತ್ । ದುಷ್ಟಾನಾಂ ಮೋಹನಾರ್ಥಾಯ ತತ್ರ ತತ್ರ ಕಥಾಃ ಕ್ವಚಿತ್॥' ಇತಿ ಸ್ಕಾಂದೇ ।** ಭಾ.ತಾ.೩.೧೪.೩೩.ಎಂದು, **'ವ್ಯತ್ಯಾಸಃ ಪ್ರಾತಿಲೋಮ್ಯಂ ಚ'** ಇತ್ಯಾದಿಯಾಗಿ ಮುಂದೆ ಒಂಬತ್ತನೆಯ ಅಧ್ಯಾಯದಲ್ಲಿಯೂ ಈ ಮಾತನ್ನು ಹೇಳುತ್ತಾರೆ. ಕಾಲ, ವ್ಯಕ್ತಿ, ದೇಶ. ಇವೇ ಮೋದಲಾದವುಗಳನ್ನು ಬದಲಿಸಿ ಹೇಳುವುದಕ್ಕೆ ವ್ಯತ್ಯಾಸವೆಂದು ಕರೆಯುತ್ತಾರೆ.

ಭಾರತಪುರಾಣಗಳು ಈ ವ್ಯತ್ಯಾಸವನ್ನು ಬಳಸಿ ಕಥೆ ಹೇಳುವ ವಾಡಿಕೆ ಇದೆ. ಅಂಥದೆ ಒಂದು ಪ್ರಸಂಗ ಇದು. ಆಚಾರ್ಯರ ಪ್ರಕಾರ ಭಾರತದಲ್ಲಿ ಬರುವ ಕಥೆ ಪುರುಷವ್ಯತ್ಯಾಸದಿಂದ ಪ್ರವೃತ್ತವಾಗಿದೆ. ಪ್ರಕೃತ ರಾಮಾವತಾರವಾದದ್ದೇ ರಾವಣಕುಂಭಕರ್ಣರ ವಧಕ್ಕಾಗಿ. ಅಂದಮೇಲೆ ಲಕ್ಷ್ಮಣ ರಾವಣನನ್ನು ಕೊಲ್ಲುವ ಪ್ರಸಕ್ತಿಯೇ ಇಲ್ಲ. ಲಕ್ಷ್ಮಣನು ನಿಜವಾಗಿ ಕೊಂದುದ್ದು ಅತಿಕಾಯನನ್ನು. ಮಹಾಭಾರತ ಅತಿಕಾಯನ ಬದಲಾಗಿ ಕುಂಭಕರ್ಣನನ್ನು ಹೇಳಿದೆ. ಇದೇ ಪುರುಷವ್ಯತ್ಯಾಸ. ಈ ರೀತಿ ಗ್ರಂಥಕರ್ತೃಗಳಾದ ವ್ಯಾಸರ ಅಭಿಪ್ರಾಯಕ್ಕೆ ಅನುಗುಣವಾಗಿಯೇ ಅವರ ಯಾವ ವಾಙ್ಮಯಕ್ಕೂ ಧಕ್ಕೆಯಾಗದಂತೆ ವ್ಯಾಖ್ಯಾನಮಾಡುವ ಕೌಶಲ ಶ್ರೀಮದಾಚಾರ್ಯರಿಗೆ ಮಾತ್ರ.

ಹೀಗೆ ಭಾಷಾಪ್ರಭೇದಗಳು, ಕಥಾನಿರೂಪಣೆಯಲ್ಲಿ ಬಳಕೆಯಾಗುವ ವ್ಯತ್ಯಾಸಾದಿ ಸಪ್ತಭೇದಗಳು, ನೂರು ರೀತಿಗಳು ಇತ್ಯಾದಿಗಳಿಂದ ಮಹಾಭಾರತದಲ್ಲಿ ಹಾಗೂ ಪುರಾಣಗಳಲ್ಲಿ ಬರುವ ಅಸಂಗತಿಗಳನ್ನು ಹೊಂದಿಸುವ ಕ್ರಮವನ್ನು ಮೊಟ್ಟ ಮೊದಲು ಆಚಾರ್ಯರು ತೋರಿಸಿಕೊಟ್ಟರು.

**ಏಕೇನ ವಿಜ್ಞಾತೇನ ಸರ್ವಮಿದಂ ವಿಜ್ಞಾತಂ ಭವತಿ**

ಲಕ್ಷಶ್ಲೋಕಾತ್ಮಕವಾದ ಮಹಾಭಾರತದ ಹಾಗೂ ನೂರುಕೋಟಿಶ್ಲೋಕಾತ್ಮಕವಾದ ಮೂಲರಾಮಾಯಣದ ಮತ್ತು ಇನ್ನಿತರ ಪುರಾಣಗಳಲ್ಲಿ ಬಂದ ರಾಮಕಥೆ ಹಾಗೂ ಕೃಷ್ಣಕಥೆಗಳ ಸಮಗ್ರವಾದ ವಿವರಗಳನ್ನು ಈ ಪುಟ್ಟಕೃತಿಯಲ್ಲಿ ನಾವು ಕಾಣಬಹುದು. ಇದನ್ನು ಅಧ್ಯಯನಮಾಡಿದ ವ್ಯಕ್ತಿ ಮೂಲಗ್ರಂಥಗಳ ಅನುಪಲಬ್ಧಿಯಿಂದಾದ ನ್ಯೂನತೆಯನ್ನು ಪರಿಪೂರ್ಣಮಾಡಿಕೊಳ್ಳಬಲ್ಲ. ಸಮಸ್ತಶಾಸ್ತ್ರಾರ್ಥನಿರ್ಣಯಗಳ ಸಾರ ಇಲ್ಲಿ ಮಡುಗಟ್ಟಿ ನಿಂತಿದೆ.

ಇದನ್ನು ತಿಳಿದರೆ ಎಲ್ಲ ತಿಳಿದಂತೆ. 'ಸಮಸ್ತಶಾಸ್ತ್ರಾರ್ಥವಿನಿರ್ಣಯೋಽಯಂ' ಎಂದು ಆಚಾರ್ಯರೇ ಇದರ ಹಿರಿಮೆಯನ್ನು ಸಾರಿದ್ದಾರೆ. ಇಂತಹ ಕೃತಿ ಏನು ಹೇಳಲು ಹೊರಟಿದೆ ಎಂದು ಸ್ಥೂಲವಾಗಿ ತಿಳಿಯೋಣ.

ಮೊದಲನೆ ಅಧ್ಯಾಯದಲ್ಲಿ ಸಮಸ್ತಶಾಸ್ತ್ರಾರ್ಥನಿರ್ಣಯ. ಎರಡನೆಯ ಅಧ್ಯಾಯದಲ್ಲಿ ಮಹಾಭಾರತದ ವಚನಗಳಿಂದಲೇ ಸಮಸ್ತಶಾಸ್ತ್ರಗಳ ಹಾಗು ಮಹಾಭಾರತದ ಪ್ರಮೇಯದಲ್ಲಿ ಏಕರೂಪತೆಯ ಪ್ರತಿಪಾದನ. ಬಳಿಕ ಮೂರನೆಯ ಅಧ್ಯಾಯದಲ್ಲಿ ಸೃಷ್ಟಿಕ್ರಮ, ಆಮೇಲೆ ಪುರುಷರೂಪ, ಅನಿರುದ್ಧಾದಿವ್ಯೂಹರೂಪ, ಹಯಗ್ರೀವರೂಪ, ಮತ್ಸ್ಯಾವತಾರದಿಂದ ಪರಶುರಾಮಾವತಾರದ ವರೆಗಿನ ಕಥಾನಿರ್ಣಯ. ನಂತರ ನಾಲ್ಕರಿಂದ ಒಂಬತ್ತನೆಯ ಅಧ್ಯಾಯದವರೆಗೆ ರಾಮಾಯಣಕಥಾನಿರ್ಣಯ. ಅದಾದ ಬಳಿಕ ಹತ್ತನೆಯ ಅಧ್ಯಾಯದಲ್ಲಿ ವ್ಯಾಸಾವತಾರ ಕಥನ. ಮುಂದೆ ಹನ್ನೊಂದನೆ ಅಧ್ಯಾಯದಿಂದ ಮೂವತ್ತೆರಡನೆಯ ಅಧ್ಯಾಯದ ವರೆಗೆ ಕ್ರಮವಾಗಿ ಕೃಷ್ಣಾವತಾರ, ಮೂವತ್ತೆರಡನೆಯ ಅಧ್ಯಾಯದ ಕೊನೆಯಭಾಗದಲ್ಲಿ ಬುದ್ಧ ಕಲ್ಕಿ ಅವತಾರಗಳನ್ನು ನಿರ್ಣಯಮಾಡುತ್ತಾರೆ ಆಚಾರ್ಯರು.

**ಅನೇಕ ಅವತಾರಗಳ ಕಥೆ ಇದು**

ಶ್ರೀಮದಾಚಾರ್ಯರು ಈ ಗ್ರಂಥದಲ್ಲಿ ಮುಖ್ಯವಾಗಿ ರಾಮಕೃಷ್ಣಾವತಾರಕಥೆಗಳನ್ನು ನಿರ್ಣಯಮಾಡುವದಕ್ಕೆ ಹೊರಟಿದ್ದಾರೆ. ಆದರೊಟ್ಟಿಗೆ ಭಗವಂತನ ಪ್ರಸಿದ್ಧವಾದ ಉಳಿದ ಎಂಟು ಅವತಾರಗಳ ಹಾಗೂ ಉಳಿದ ಅವತಾರಗಳ ನಿರ್ಣಯವೂ ಅವರ ಉದ್ದೇಶ್ಯ ಎನ್ನುವದನ್ನು ಮರೆಯುವಂತಿಲ್ಲ.

ಇದಕ್ಕೆ ಕಾರಣ ಹಲವು. ಮೊದಲನೆಯದಾಗಿ ಭೃಗುಪತ್ನಿಯ ಶಾಪ. ಈ ಕಥೆಯನ್ನು ಅನೇಕಪುರಾಣಗಳಲ್ಲಿ ನಾವು ನೋಡುತ್ತೇವೆ. ಇದನ್ನು ತಿಳಿದಾಗ ಭಗವಂತ ಭೃಗುಪತ್ನಿಯ ಶಾಪದಿಂದ ಭೂಮಿಯಮೇಲೆ ಹತ್ತವತಾರ ಧರಿಸಿದ ಎಂದು ಭ್ರಾಂತಿ ಬರುತ್ತದೆ.

ಇದಲ್ಲದೆ ಅನೇಕ ವಾದಿಗಳು ಬುದ್ಧನು ವಿಷ್ಣುವಿನ ಅವತಾರವಲ್ಲ, ಅವನೊಬ್ಬ ಮಾಯಾಮನುಷ್ಯ ಎಂದು ಹೇಳುತ್ತಾರೆ. ಆದ್ದರಿಂದ ಬುದ್ಧನನ್ನು ಹತ್ತು ಅವತಾರಗಳಲ್ಲಿ ಸೇರಿಸುವದಿಲ್ಲ. ಅದರ ಬದಲಾಗಿ ಶೇಷಾವತಾರನಾದ ಬಲರಾಮನನ್ನು ದಶಾವತಾರದಲ್ಲಿ ಸೇರಿಸುತ್ತಾರೆ.

ಕೆಲವರು ಪರಶುರಾಮ ವಿಷ್ಣುವಿನ ಅವತಾರನಲ್ಲ, ಅವನೊಬ್ಬ ಸಾಮಾನ್ಯ ಋಷಿ ಎಂದು ವಾದಿಸುತ್ತಾರೆ.

ಕೆಲವರು ವೇದವ್ಯಾಸದೇವರು ಅಪಾಂತರತಮ ಎನ್ನುವ ಒಬ್ಬ ಋಷಿ ಎಂಬುದಾಗಿ ವಾದಿಸುತ್ತಾರೆ.

ಹೀಗೆ ವಿಷ್ಣುವಿನ ಹತ್ತು ಅವತಾರಗಳ ವಿಷಯದಲ್ಲಿ ಅನೇಕ ವಿವಾದಗಳು ಕೇಳಿಬರುತ್ತವೆ. ಈ ವಿಧವಾದ ಭ್ರಾಂತಿಯನ್ನು ಪರಿಹರಿಸುವುದೂ ಆಚಾರ್ಯರ ಒಂದು ಉದ್ದೇಶ. ತಾತ್ಪರ್ಯನಿರ್ಣಯವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಈ ವಿಚಾರ ತಿಳಿಯುತ್ತದೆ. ಮೂರನೆಯ ಅಧ್ಯಾಯದಲ್ಲಿ ಸರ್ಗಾನುಸರ್ಗಗಳನ್ನು ಹೇಳಿದ ಮೇಲೆ ವಿಷ್ಣುವಿನ ಮತ್ಸ್ಯಾವತಾರದಿಂದ ಪರಶುರಾಮದೇವರ ಅವತಾರವನ್ನು ಹೇಳಿದರು. ಆಮೇಲೆ ಒಂಭತ್ತನೆಯ ಅಧ್ಯಾಯದವರೆಗೆ ರಾಮಕಥೆಯನ್ನು ನಿರ್ಣಯಮಾಡಿದರು. ಬಳಿಕ ವ್ಯಾಸಾವತಾರದ ಕಥೆಯನ್ನು ಹೆಣೆದರು. ಮುಂದೆ ಹನ್ನೊಂದರಿಂದ ಮೂವತ್ತೆರಡನೆಯ ಅಧ್ಯಾಯದವರೆಗೆ ಸಮಗ್ರವಾಗಿ ಭಾರತಕಥೆಯನ್ನು ನಿರ್ಣಯಿಸಿದರು. ಬಳಿಕ ಅದೇ ಅಧ್ಯಾಯದ ಕೊನೆಯಲ್ಲಿ ಬುದ್ಧ ಹಾಗೂ ಕಲ್ಕಿಯ ಅವತಾರಗಳನ್ನು ನಿರ್ಣಯಮಾಡುತ್ತಾರೆ.

ಸರ್ವಸ್ಯ ನಿರ್ಣಯಸುವಾಕ್ಯಸಮುದ್ಧೃತೀ ತು ಸ್ವಧ್ಯಾಯಯೋರ್ಹರಿಪದಸ್ಮರಣೇನ ಕೃತ್ವಾ ।
ಆನಂದತೀರ್ಥವರನಾಮವತೀ ತೃತೀಯಾ ಭೈಮೀತನುರ್ಮರುತ ಆಹ ಕಥಾಃ ಪರಸ್ಯ ॥ ತಾ.ನಿ.೩.೯

ಎಂಬ ಆಚಾರ್ಯರ ವಚನ ಮೇಲಿನ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

**ಈ ಸಂಪುಟದ ಕುರಿತಾಗಿ**

ಈ ಸಂಪುಟ ರಾಮಕಥಾನಿರ್ಣಯಕ್ಕೆ ಸಂಬಂಧಿಸಿದ್ದು. ಮೂರನೆಯ ಅಧ್ಯಾಯದ ಕೊನೆಯ ಭಾಗ, ಹಾಗೂ ನಾಲ್ಕನೆಯ ಅಧ್ಯಾಯದಿಂದ ಒಂಭತ್ತನೆಯ ಅಧ್ಯಾಯದ ಸಮಾಪ್ತಿಯವರೆಗೂ ರಾಮಾಯಣಕ್ಕೆ ಸಂಬಂಧಿಸಿದ ವಿಶೇಷನಿರ್ಣಯಗಳು ನಮಗೆ ಸಿಗುತ್ತವೆ.

ಈ ಪ್ರಸಂಗದಲ್ಲಿ ರಾಮಕಥೆಗೆ ಮೂಲಸ್ರೋತಸ್ಸು ಯಾವುದು? ವಾಲ್ಮೀಕಿಮಹರ್ಷಿಗಳು ತಮ್ಮ ಪ್ರತಿಭೆಯಿಂದಲೇ ಈ ಕಥೆಯನ್ನು ಕಾವ್ಯದಲ್ಲಿ ನಿಬಂಧನ ಮಾಡಿದ್ದೋ? ಅಥವಾ ಹಿಂದಿನ ಗ್ರಂಥಗಳಲ್ಲಿ ಬಿಡಿಬಿಡಿಯಾಗಿ ಬಂದ ಕಥೆಯನ್ನು ಸಂಗ್ರಹಿಸಿ ಹೇಳಿದ್ದೋ? ಈ ವಿಷಯದಲ್ಲಿ ಅನೇಕ ಪಾಶ್ಚಾತ್ಯ ಹಾಗೂ ಪೌರ್ವಾತ್ಯ ವಿದ್ವಾಂಸರು ನಿರಾಧಾರವಾದ ಅಭಿಪ್ರಾಯಗಳನ್ನು ಮಂಡಿಸುತ್ತಾರೆ. ಡಾ.ವೆಬರ, ಡಾ.ಯಾಕೋಬೀ, ಡಾ.ಹಾಪ್‌ಕಿನ್ಸ ಮೊದಲಾದ ಪಾಶ್ಚಾತ್ಯ ವಿದ್ವಾಂಸರು. ಡಾ.ದಿನೇಶಚಂದ್ರಸೇನ, ರಾಹುಲಸಾಂಕೃತ್ಯಾಯನ, ನಂದಕೌಸಲ್ಯಾಯನ, ಸುನೀತಿಕುಮಾರಚಟ್ಟೋಪಾಧ್ಯಾಯ, ಸುಕುಮಾರಸೇನ ಮುಂತಾದ ಪಾಶ್ಚಾತ್ಯ ವಿದ್ಯೆಯಲ್ಲಿ ಸಚ್ಚೈಲಸ್ನಾತರಾದ ಭಾರತೀಯ ವಿದ್ವಾಂಸರೂ ಕೂಡ ಇಂತಹ ವಾದಗಳಿಗೆ ನೀರೆರೆಯುತ್ತಾರೆ. ಇವರಲ್ಲಿ ಕೆಲವರು ದಸರಥಜಾತಕ ಹಾಗೂ ಹೋಮರನ ಮಹಾಕಾವ್ಯವೇ ರಾಮನ ಕಥೆಗೆ ಮೂಲ ಎಂದು ಹೇಳುತ್ತಾರೆ.

ಇನ್ನು ಕೆಲವರು ಅಯೋಧ್ಯಾಕಾಂಡದಲ್ಲಿ ಬರುವ ಕಥೆಗೆ ದಶರಥನೇ ನಾಯಕ. ರಾಮಾಯಣದ ಪೂರ್ವಭಾಗ ಅವನ ಕುರಿತಾಗಿ ಹೊರಟ ಕಾವ್ಯ ಎಂದು ಹೇಳುವರು. ಮಧ್ಯಭಾಗದಲ್ಲಿ ಮಹಾಬ್ರಾಹ್ಮಣನಾದ ರಾವಣನ ವಿಷಯದಲ್ಲಿ ದಕ್ಷಿಣದೇಶದಲ್ಲಿ ಪ್ರಚಲಿತವಾದ ಅನೇಕ ಕಥೆಗಳು, ಪೂರ್ವಕಾಲದಲ್ಲಿ ಪ್ರಚಲಿತವಾದ ಕಪಿಯ ಉಪಾಸನಾವಿಷಯಕ್ಕೆ ಸಂಬಂಧಿಸಿದ ಅನೇಕ ಕಥೆಗಳು ಮತ್ತು ದಸರಥಜಾತಕ ಹೀಗೆ ಈ ಮೂರು ಕಥೆಗಳನ್ನು ಸೇರಿಸಿ ವಾಲ್ಮೀಕಿಯು ರಾಮಾಯಣವನ್ನು ಬರೆದ ಎಂದು ಹೇಳುವರು. ಹೀಗೆ ಕೇವಲ ಸ್ವಬುದ್ಧಿವೈಭವವನ್ನು ತೋರಿಸುವದಕ್ಕಾಗಿ ಅನೇಕರು ಈ ಕೃತಿಯನ್ನು ವಿಕೃತವಾಗಿ ಮಾಡುವುದುಂಟು. ಒಂದ ದೇಶದ, ಒಂದು ಸಂಸ್ಕೃತಿಯ ಶ್ರದ್ಧಾವಿಶ್ವಾಸಗಳನ್ನು ಕೆದಕುವುದೇ ಇದರ ಹಿಂದೆ ಇರುವ ದುರುದ್ದೇಶ.

ಅದಿರಲಿ, ವಾಸ್ತವಿಕವಾಗಿ ರಾಮಾಯಣಕ್ಕೆ ಮೂಲಸ್ರೋತಸ್ಸು ಯಾವುದು ಎಂಬುದನ್ನು ನಿಜವಾದ ಆಧಾರಗಳಿಂದ ತಿಳಿಯೋಣ. ಸೃಷ್ಟಿಯ ಆದಿಕಾಲದಲ್ಲಿ ಹಯಗ್ರೀವರೂಪಿಯಾದ ಪರಮಾತ್ಮನು ಒಂದುನೂರುಕೋಟಿಶ್ಲೋಕಾತ್ಮಕವಾದ ಮೂಲರಾಮಾಯಣವನ್ನು ಬ್ರಹ್ಮದೇವರಿಗೆ ಉಪದೇಶಿಸಿದ. ಬ್ರಹ್ಮದೇವರು ನಾರದರಿಗೆ ನಾರದರು ವಾಲ್ಮೀಕಿಗಳಿಗೆ. ವಾಲ್ಮೀಕಿಋಷಿಗಳು, ನಾರದರು ಉಪದೇಶಮಾಡಿದ ರಾಮನ ಕಥೆಯನ್ನು ಇಪ್ಪತ್ತುನಾಲ್ಕುಸಾವಿರ ಶ್ಲೋಕಗಳಲ್ಲಿ ಸಂಗ್ರಹಿಸಿ ರಾಮಾಯಣವನ್ನು ಬರೆದರು. ಈ ಮಾತುಗಳನ್ನು ಮತ್ಸ್ಯಪುರಾಣ ನಮಗೆ ಸ್ಫುಟವಾಗಿ ತಿಳಿಸಿಕೊಡುತ್ತದೆ.

ನಿರ್ದಗ್ಧೇಷು ಚ ಲೋಕೇಷು ವಾಜಿರೂಪೇಣ ವೈ ಮಯಾ ।
ಶ್ರುತ್ವಾ ಜಗಾದ ಚ ಮುನೀನ್ ಪ್ರತಿ ದೇವಶ್ಚತುರ್ಮುಖಃ ॥

...ವಾಲ್ಮೀಕಿನಾಪಿ ಯತ್ಪ್ರೋಕ್ತಂ ರಾಮೋಪಾಖ್ಯಾನಮುತ್ತಮಮ್ ।
ಬ್ರಹ್ಮಣಾಭಿಹಿತಂ ತಚ್ಚ ಶತಕೋಟಿಪ್ರವಿಸ್ತರಮ್ ॥
ಆಹೃತ್ಯ ನಾರದಾಯೈವ ತೇನ ವಾಲ್ಮೀಕಯೇ ಪುನಃ ॥

ಎಂದು ಮತ್ಸ್ಯಪುರಾಣದ ೫೩ನೆಯ ಅಧ್ಯಾಯದಲ್ಲಿರುವ ವಚನಗಳು.

ಇದಲ್ಲದೆ ವಾಲ್ಮೀಕಿರಾಮಾಯಣದಲ್ಲಿಯೂ ಮೇಲಿನ ವಿವರವನ್ನು ನಾವು ಕಾಣಬಹುದು.

**ಆಚಾರ್ಯರ ದೃಷ್ಟಿಯಲ್ಲಿ ರಾಮಕಥೆಗೆ ಮೂಲಸ್ರೋತಸ್ಸು**

ಇತ್ಯಶೇಷಪುರಾಣೇಭ್ಯಃ ಪಂಚರಾತ್ರೇಭ್ಯ ಏವ ಚ ।
ಭಾರತಾಚ್ಚೈವ ವೇದೇಭ್ಯೋ ಮಹಾರಾಮಾಯಣಾದಪಿ ॥

ಪರಸ್ಪರವಿರೋಧಸ್ಯ ಹಾನಾನ್ನಿರ್ಣೇಯ ತತ್ತ್ವತಃ ।
ಯುಕ್ತ್ಯಾ ಬುದ್ಧಿಬಲಾಚ್ಚೈವ ವಿಷ್ಣೋರೇವ ಪ್ರಸಾದತಃ ॥

ಬಹುಕಲ್ಪಾನುಸಾರೇಣ ಮಯೇಯಂ ಸತ್ಕಥೋದಿತಾ ।
ನೈಕಗ್ರಂಥಾಶ್ರಯಾ ತಸ್ಮಾನ್ನಾಶಂಕ್ಯಾತ್ರ ವಿರುದ್ಧತಾ ॥ ತಾ.ನಿ.೯.೧೨೨-೧೨೪

ಆಚಾರ್ಯರು ಒಂಭತ್ತನೆಯ ಅಧ್ಯಾಯದ ಕೊನೆಯಲ್ಲಿ ತಾವು ನಿರ್ಣಯಮಾಡಿದ ರಾಮಕಥೆಗೆ ಆಧಾರವಾದ ಮೂಲಭೂತ ಗ್ರಂಥಗಳ ಪಟ್ಟಿಯನ್ನು ನಮಗೆ ಕೊಡುತ್ತಾರೆ. ಸಮಗ್ರವಾದ ವೇದ, ಪುರಾಣಗ್ರಂಥಗಳು, ಪಂಚರಾತ್ರಆಗಮಗಳು, ಮಹಾಭಾರತ ಕೊನೆಯದಾಗಿ ಹಯಗ್ರೀವಪ್ರೋಕ್ತವಾದ ಮೂಲರಾಮಾಯಣ ಹೀಗೆ ಅನೇಕ ಆಕರಗಳಲ್ಲಿ ಬಂದ ಕಥೆಯನ್ನು ಶ್ರೀಮದಾಚಾರ್ಯರು ಸಂಗ್ರಹಿಸಿರುವರು. ಈ ಗ್ರಂಥಗಳು ಇದ್ದಮಾತ್ರಕ್ಕೆ ಕಥಾನಿರ್ಣಯ ಅಸಂಭಾವಿತ. ಭಾಗವತದಲ್ಲಿ ಬಂದ ರಾಮಕಥೆ ಒಂದು ತೆರನಾದರೆ ಪದ್ಮಪುರಾಣದಲ್ಲಿ ಬರುವ ರಾಮಕಥೆಯ ವಿವರಗಳೇ ಬೇರೆ. ಇದಲ್ಲದೆ ಚತುರ್ಮುಖಬ್ರಹ್ಮದೇವರ ಪ್ರತಿದಿನದಲ್ಲಿಯೂ ವಿಷ್ಣುವಿನ ಹತ್ತು ಅವತಾರಗಳಿವೆ. ಆಯಾ ದಿನಕಲ್ಪಗಳಿಗೆ ಅನುಗುಣವಾಗಿ ರಾಮಕಥೆಯಲ್ಲಿ ಕೃಷ್ಣಕಥೆಯಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಈ ವಿಷಯವನ್ನು ನೀಲಕಂಠ, ಗೋವಿಂದರಾಜ ಮೊದಲಾದ ಎಲ್ಲ ವ್ಯಾಖ್ಯಾನಕಾರರು ಒಪ್ಪಿದ್ದಾರೆ. ಹೀಗೆ ಮೇಲೆ ಹೇಳಿದ ಕಾರಣಗಳಿಂದ ಪ್ರಧಾನವಾದ ಕಥೆಗಳಲ್ಲಿಯೇ ಪರಸ್ಪರ ವಿರೋಧಗಳು ಕಂಡುಬರುತ್ತವೆ. ಆ ವಿರೋಧಪರಿಹಾರಕ್ಕೆ, ತಾತ್ವಿಕವಾದ ಅರ್ಥನಿರ್ಣಯಕ್ಕೆ ಬೇಕಾದ ಯುಕ್ತಿಗಳು, ಬುದ್ಧಿಶಕ್ತಿ ಇವೆರಡನ್ನು ಭಗವಂತನ ಅನುಗ್ರಹಬಲದಿಂದ ಪಡೆದು ಈ ಕಥೆಯನ್ನು ನಿರ್ಣಯಮಾಡಿದ್ದಾರೆ.

**ವಾಲ್ಮೀಕಿರಾಮಾಯಣ ಇತಿಹಾಸವೇ?**

ಮೇಲೆ ಕಂಡ ವಿವರಣೆಗನುಣವಾಗಿ ಶ್ರೀಮದಾಚಾರ್ಯರ ರಾಮಕಥಾನಿರ್ಣಯಕ್ಕೆ ಮೂಲರಾಮಾಯಣ ಮೊದಲಾದ ಇತಿಹಾಸಗ್ರಂಥಗಳೇ ಮೂಲ ಎಂದು ತಿಳಿದಿದ್ದಾಯಿತು. ಇತಿಹಾಸ ಎನ್ನುವ ಶಬ್ದ ಮಹಾಭಾರತ, ಪಂಚರಾತ್ರಾಗಮ, ಮೂಲರಾಮಾಯಣ ಈ ಮೂರು ಗ್ರಂಥಗಳನ್ನು ಮಾತ್ರ ಹೇಳುತ್ತದೆ. ಅದಕ್ಕೆ ಆಚಾರ್ಯರು ಬೃಹದ್ಭಾಷ್ಯದಲ್ಲಿ ಉದಾಹರಿಸಿದ **'ಪಂಚರಾತ್ರಂ ಭಾರತಂ ಚ ಮೂಲರಾಮಾಯಣಂ ತಥಾ । ಇತಿಹಾಸ ಇತಿ ಪ್ರೋಕ್ತೋ..........॥'** ಎಂಬ ವಚನವೇ ಮೂಲವಾಗಿದೆ. ಇದಲ್ಲದೆ ಸ್ಕಾಂದಪುರಾಣದಲ್ಲಿ ಇವತ್ತಿಗೂ

